RNI No. **KAR:IL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಮಾರ್ಚ್ ೭, ೨೦೧೩ (ಫಾಲ್ಗುಣ ೧೬, ಶಕ ವರ್ಷ ೧೯೩೪)<br>**Bangalore, Thursday, March 7, 2013 (Phalguna 16, Shaka Varsha 1934)** | ಸಂಚಿಕೆ ೧೦<br>Issue 10 |
|---|---|---|

## ಭಾಗ – ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ನ್ಯಾಯಾಲಯ, ಚಿಕ್ಕಬಳ್ಳಾಪುರ

**ಅಧಿಸೂಚನೆ *ಸಂಖ್ಯೆ:* ADMN - 01/2013 *ದಿನಾಂಕ:* 19.02.2013**

**ವಿಷಯ:–** ಶೀಘ್ರಲಿಪಿಗಾರರು, ಬೆರಳಚ್ಚುಗಾರರು ಹಾಗೂ ಜವಾನರ ಹುದ್ದೆಗಳನ್ನು ಭರ್ತಿ ಮಾಡುವ ಸಲುವಾಗಿ ಅರ್ಜಿಗಳನ್ನು ಆಹ್ವಾನಿಸುತ್ತಿರುವ ಬಗ್ಗೆ.

**ಉಲ್ಲೇಖ:–** 1. ಮಾನ್ಯ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ. LCA-II, 128/2012, Dated: 21.01.2013.

2. ಈ ನ್ಯಾಯಾಲಯದ ಟಿಪ್ಪಣಿ ಮತ್ತು ಆದೇಶದ ದಿನಾಂಕ 19.02.2013.

ಮೇಲ್ಕಂಡ ಉಲ್ಲೇಖದನ್ವಯ ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದವರು 02 ಶೀಘ್ರಲಿಪಿಗಾರರು, 03–ಬೆರಳಚ್ಚುಗಾರರು, ಹಾಗೂ 06–ಜವಾನರ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು 1ನೇ ಉಲ್ಲೇಖದ ಮೇರೆಗೆ ಅನುಮತಿ ನೀಡಿರುತ್ತಾರೆ. ಅದರಂತೆ ಈ ಅಧಿಸೂಚನೆ ಹೊರಡಿಸಲಾಗಿದೆ.

ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: **05.04.2013** ಸಂಜೆ: 5.00 ಗಂಟೆ ಒಳಗೆ. ಅರ್ಜಿ ಸಲ್ಲಿಸಬೇಕಾದ **ವಿಳಾಸ: ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಿಕ್ಕಬಳ್ಳಾಪುರ ಜಿಲ್ಲೆ , ಚಿಕ್ಕಬಳ್ಳಾಪುರ.**

ಮೇಲ್ಕಂಡ ಅಧಿಸೂಚನೆಯ ಅನ್ವಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಬಳ್ಳಾಪುರ ಘಟಕದಲ್ಲಿ ಖಾಲಿ ಇರುವ 02–ಶೀಘ್ರಲಿಪಿಗಾರರು, 03–ಬೆರಳಚ್ಚುಗಾರರು, ಹಾಗೂ 06–ಜವಾನರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ನಿಗದಿಪಡಿಸಿದ ಅರ್ಜಿ ನಮೂನೆಯನ್ನು ಬೆರಳಚ್ಚು ಪ್ರತಿ / ಗಣಕೀಕೃತ ಪ್ರತಿಯಲ್ಲಿಯೇ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿಮಾಡಿ ಸಲ್ಲಿಸಬೇಕು. ಅರ್ಜಿ ನಮೂನೆಯನ್ನು ಸಹ ಈ ಅಧಿಸೂಚನೆಯೊಂದಿಗೆ ಲಗತ್ತಿಸಲಾಗಿದೆ.

**ಭರ್ತಿ ಮಾಡಲ್ಪಡುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣ**

**ಶೀಘ್ರಲಿಪಿಗಾರರು : 02**

| ಕ್ರ. ಸಂ. | ಮೀಸಲಾತಿ | ವರ್ಗೀಕರಣ | | | | | | | | |
|---|---|---|---|---|---|---|---|---|---|---|
| | | ಸಾ.ಅ | ಪ.ಜಾ | ಪ.ಪಂ | ಪ್ರ–1 | 2(ಎ) | 2(ಬಿ) | 3(ಎ) | 3(ಬಿ) | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಮಹಿಳೆ | – | 1 | – | – | – | – | – | – | **01** |
| 2 | ಮಾ. ಸೈ | – | – | – | – | – | – | – | – | – |
| 3 | ಅಂ.ವಿ | – | – | – | – | – | – | – | – | – |
| 4 | ಯೋ.ನಿ.ಅ | – | – | – | – | – | – | – | – | – |
| 5 | ಗ್ರಾಮೀಣ | – | – | – | – | – | – | – | – | – |

| ಕ್ರ. ಸಂ. | ಮೀಸಲಾತಿ | ವರ್ಗೀಕರಣ | | | | | | | | |
|---|---|---|---|---|---|---|---|---|---|---|
| | | **ಸಾ.ಅ** | **ಪ.ಜಾ** | **ಪ.ಪಂ** | **ಪ್ರ–1** | **2(ಎ)** | **2(ಬಿ)** | **3(ಎ)** | **3(ಬಿ)** | **ಒಟ್ಟು** |
| 1 | 2 | 3 | 4 | 5 | 6 | 7 | 8 | 9 | 10 | 11 |
| 6 | ಕ.ಮಾ.ಅ | 1 | – | – | – | – | – | – | – | **01** |
| 7 | ಇತರೆ | – | – | – | – | – | – | – | – | – |
| | ಒಟ್ಟು | **1** | **1** | – | – | – | – | – | – | **02** |

**ಬೆರಳಚ್ಚುಗಾರರು : 03**

| ಕ್ರ. ಸಂ. | ಮೀಸಲಾತಿ | ವರ್ಗೀಕರಣ | | | | | | | | |
|---|---|---|---|---|---|---|---|---|---|---|
| | | **ಸಾ.ಅ** | **ಪ.ಜಾ** | **ಪ.ಪಂ** | **ಪ್ರ–1** | **2(ಎ)** | **2(ಬಿ)** | **3(ಎ)** | **3(ಬಿ)** | **ಒಟ್ಟು** |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಮಹಿಳೆ | – | – | – | – | 1 | – | – | – | **01** |
| 2 | ಮಾ. ಸೈ | – | – | – | – | – | – | – | – | – |
| 3 | ಅಂ.ವಿ | 1 | – | – | – | – | – | – | – | **01** |
| 4 | ಯೋ.ನಿ.ಅ | – | – | – | – | – | – | – | – | – |
| 5 | ಗ್ರಾಮೀಣ | – | 1 | – | – | – | – | – | – | **01** |
| 6 | ಕ.ಮಾ.ಅ | – | – | – | – | – | – | – | – | – |
| 7 | ಇತರೆ | – | – | – | – | – | – | – | – | – |
| | ಒಟ್ಟು | **01** | **01** | – | – | **01** | – | – | – | **03** |

**ಜವಾನರು : 06**

| ಕ್ರ. ಸಂ. | ಮೀಸಲಾತಿ | ವರ್ಗೀಕರಣ | | | | | | | | |
|---|---|---|---|---|---|---|---|---|---|---|
| | | **ಸಾ.ಅ** | **ಪ.ಜಾ** | **ಪ.ಪಂ** | **ಪ್ರ–1** | **2(ಎ)** | **2(ಬಿ)** | **3(ಎ)** | **3(ಬಿ)** | **ಒಟ್ಟು** |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | ಮಹಿಳೆ | 1 | – | – | – | – | 1 | – | – | **02** |
| 2 | ಮಾ. ಸೈ | – | – | – | – | – | – | – | – | – |
| 3 | ಅಂ.ವಿ | – | – | – | – | – | – | – | – | – |
| 4 | ಯೋ.ನಿ.ಅ | – | – | – | – | – | – | – | – | – |
| 5 | ಗ್ರಾಮೀಣ | 1 | 1 | – | – | – | – | – | – | **02** |
| 6 | ಕ.ಮಾ.ಅ | 1 | – | – | – | – | – | – | – | **01** |
| 7 | ಇತರೆ | – | – | – | 1 | – | – | – | – | **01** |
| | **ಒಟ್ಟು** | **3** | **1** | – | **1** | – | **1** | – | – | **6** |

**ವಿದ್ಯಾರ್ಹತೆ ಮತ್ತು ವೇತನ ಶ್ರೇಣಿ:–**

**ಶೀಘ್ರಲಿಪಿಗಾರರು:**

1. ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
2. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪ್ರೌಢದರ್ಜೆ (Senior Grade) ಮತ್ತು ಶೀಘ್ರಲಿಪಿ ಪ್ರೌಢದರ್ಜೆ (Senior Grade) ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
3. ಆದೇಶ ಸಂಖ್ಯೆ ಡಿಪಿಎಆರ್ 59 ಎಸ್‌ಸಿಆರ್ 2010 ದಿನಾಂಕ 07/07/2012 ರ ಪ್ರಕಾರ ದಿನಾಂಕ 22/03/2012 ರಿಂದ ಜಾರಿಗೆ ಬರುವಂತೆ ಕಂಪ್ಯೂಟರ್ ಜ್ಞಾನ ಕಡ್ಡಾಯ.

**ವೇತನ ಶ್ರೇಣಿ** : ರೂ. 14550–350–15600–400–17200–450–19000–500–21000–600–24600–700–26700 ಮತ್ತು ಇತರೆ ಭತ್ಯೆಗಳು.

**ಬೆರಳಚ್ಚುಗಾರರು:**

4. ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
5. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪ್ರೌಢದರ್ಜೆ (Senior Grade) ಪರೀಕ್ಷೆ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
6. ಆದೇಶ ಸಂಖ್ಯೆ ಡಿಪಿಎಆರ್ 59 ಎಸ್‌ಸಿಆರ್ 2010 ದಿನಾಂಕ 07/07/2012 ರ ಪ್ರಕಾರ ದಿನಾಂಕ 22/03/2012 ರಿಂದ ಜಾರಿಗೆ ಬರುವಂತೆ ಕಂಪ್ಯೂಟರ್ ಜ್ಞಾನ ಕಡ್ಡಾಯ.

**ವೇತನ ಶ್ರೇಣಿ :** ರೂ. 11600–200–12000–250–13000–300–14200–350–15600–400–17200–450–19000–500–21000 ಮತ್ತು ಇತರೆ ಭತ್ಯೆಗಳು.

**ಜವಾನರು:**

1. ಏಳನೇ ತರಗತಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.

**ವೇತನ ಶ್ರೇಣಿ :** ರೂ. 9600–200–12000–250–13000–300–14200–350–14550 ಮತ್ತು ಇತರೆ ಭತ್ಯೆಗಳು.

**:: ವಯೋಮಿತಿ :: (ಅರ್ಜಿ ಸಲ್ಲಿಸಲು ಕೊನೆಯ ದಿನಾಂಕಕ್ಕೆ ಅನುಗುಣವಾಗಿ)**

| | | | | |
|---|---|---|---|---|
| ಕನಿಷ್ಠ ವಯೋಮಿತಿ | : | 18 ವರ್ಷ | | |
| ಗರಿಷ್ಠ ವಯೋಮಿತಿ | : | ಸಾಮಾನ್ಯ ವರ್ಗ | – | 35 ವರ್ಷ |
| | | 2ಎ/ 2ಬಿ/ 3ಎ/ 3ಬಿ | – | 38 ವರ್ಷ |
| | | ಪ.ಜಾ/ಪ.ಪಂ/ಪ್ರವರ್ಗ–1 | – | 40 ವರ್ಷ |

ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಆಯ್ಕೆ ವಿಧಾನ:**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟ್ರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

**ಶೀಘ್ರಲಿಪಿಗಾರರು**

ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು ನಿಮಿಷಕ್ಕೆ 120 ಪದಗಳಂತೆ 5 ನಿಮಿಷದಲ್ಲಿ ನೀಡುವ ಉಕ್ತಲೇಖನ ವಿಷಯವನ್ನು 45 ನಿಮಿಷದೊಳಗೆ ಬೆರಳಚ್ಚು ಮಾಡುವ ನೈಪುಣ್ಯ/ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು. 1 ಹುದ್ದೆಗೆ 5 ಅಭ್ಯರ್ಥಿಗಳಂತೆ ಅತಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು (1 : 5 ರ ಅನುಪಾತದಲ್ಲಿ).

**ಬೆರಳಚ್ಚುಗಾರರು**

ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಬೆರಳಚ್ಚು ಮಾಡುವ ನೈಪುಣ್ಯ/ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು. 1 ಹುದ್ದೆಗೆ 5 ಅಭ್ಯರ್ಥಿಗಳಂತೆ ಅತಿ ಹೆಚ್ಚು ಅಂಕ ಪಡೆದ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು (1 : 5ರ ಅನುಪಾತದಲ್ಲಿ).

**ಟಿಪ್ಪಣಿ:** ಅರ್ಹತಾ ಪರೀಕ್ಷೆಯಲ್ಲಿ ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು , ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು.

**ಜವಾನರು:**

ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ ಆಧಾರದ ಮೇಲೆ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸಿ 1 :10 ರ ಅನುಪಾತದಲ್ಲಿ 1 ಹುದ್ದೆಗೆ 10 ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

**ಅಭ್ಯರ್ಥಿಗಳನ್ನು 2 ವರ್ಷಗಳ ಕಾಲ ಪರೀಕ್ಷಣಾ ಅವಧಿಯಲ್ಲಿಡಲಾಗುವುದು.**

**ಲಗತ್ತಿಸಬೇಕಾದ ದಾಖಲಾತಿಗಳು:**

ಅಭ್ಯರ್ಥಿಗಳು ಈ ಕೆಳಕಂಡ ಪ್ರಮಾಣಪತ್ರಗಳ ಒಂದೊಂದು ಫೋಟೋ ಪ್ರತಿಗಳನ್ನು (Xerox Copy) ಸ್ವಯಂ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು. **ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.**

1. ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿಗಳು ಹಾಗೂ ಪ್ರಮಾಣಪತ್ರಗಳು.

2. ಜನ್ಮದಿನಾಂಕವನ್ನು ನಮೂದಿಸಿರುವ ಏಳನೇ ತರಗತಿ, ಎಸ್.ಎಸ್.ಎಲ್.ಸಿ, ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ /ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ
3. ಸೈನಿಕ ಸೇವೆಯಿಂದ ಬಿಡುಗಡೆಯಾದ / ವಿಮುಕ್ತಿಹೊಂದಿದ ಬಗ್ಗೆ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ)
4. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ನಮೂನೆ –ಡಿ ಯಲ್ಲಿ , ಪ್ರವರ್ಗ–1 ಅಭ್ಯರ್ಥಿಗಳು ನಮೂನೆ–ಇ ಯಲ್ಲಿ ಮತ್ತು 2–ಎ , 2–ಬಿ , 3–ಎ , 3–ಬಿ ಅಭ್ಯರ್ಥಿಗಳು ನಮೂನೆ ಎಫ್ ರಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಲಗತ್ತಿಸಬೇಕು.
5. ಶಾಲಾ ಮುಖ್ಯೋಪಾಧ್ಯಾಯರು / ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ಪಡೆದ ಎರಡು ನಡತೆ ಪ್ರಮಾಣ ಪತ್ರಗಳು.
6. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ/96/ಸೇನನಿ/2005ದ ದಿನಾಂಕ: 10.8.2005ರ ಪ್ರಕಾರ ನಿಗದಿತ ನಮೂನೆ–2ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ , ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.
7. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ–2 ರ ಜೊತೆ ನಮೂನೆ–1 ರಲ್ಲೂ ದೃಢೀಕರಣ ಪತ್ರವನ್ನು ಸಲ್ಲಿಸುವುದು.
8. ವಿಧವೆಯರು, ಜೀತ ಕಾರ್ಮಿಕರು ಹಾಗೂ ವಯೋಮಿತಿ ರಿಯಾಯಿತಿಗೆ ಅರ್ಹರಾದ ಇನ್ನಿತರರು ವಯೋಮಿತಿ ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣಪತ್ರವನ್ನು ಸಲ್ಲಿಸುವುದು.

**ಪ್ರಮುಖವಾದ ಸೂಚನೆಗಳು :**

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ನಮೂದಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯಅಧಿನಿಯಮ ಅಥವಾ ಕೇಂದ್ರ ಅಧಿನಿಯಮ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.
2. ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸೇವೆ ಸಲ್ಲಿಸಿದ್ದಾರೋ ಅಷ್ಟು ವರ್ಷಗಳ ಅಥವಾ 05 ವರ್ಷಗಳ ಅವಧಿ , ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
3. ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ಮೇಲಾಧಿಕಾರಿಗಳಿಂದ ಪಡೆದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.
4. ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣಕಾಲಿಕ ಪರೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕೆಡೆಟ್ ಪರೀಕ್ಷಕನಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.
5. ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.
6. ಅರ್ಹತಾ ಪರೀಕ್ಷೆಗೆ ಹಾಜರಾಗುವ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗುವುದು.

**ಇತರೆ ಸೂಚನೆಗಳು:**

1. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ, ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
2. ಒಂದಕ್ಕಿಂತ ಹೆಚ್ಚು ಹುದ್ದೆಗೆ ಅರ್ಜಿ ಸಲ್ಲಿಸುವವರು ಪ್ರತಿ ಹುದ್ದೆಗಳಿಗೂ ಪ್ರತ್ಯೇಕವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.
3. ಅರ್ಜಿಯಲ್ಲಿ ಮತ್ತು ಲಕೋಟೆಯ ಮೇಲೆ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
4. ಅರ್ಜಿಯೊಂದಿಗೆ 5 ರೂಪಾಯಿ ಅಂಚೆ ಚೀಟಿ (Postal Stamp) ವನ್ನು ಹೊಂದಿರುವ ಸ್ವ–ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.
5. ಅರ್ಜಿಯೊಂದಿಗೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಸ್ವದೃಢೀಕರಿಸಿ ಲಗತ್ತಿಸಬೇಕು.

6. ಸಂದರ್ಶನ ಪತ್ರ ಬರದಿರುವ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಲ್ಲವೆಂದು ಭಾವಿಸಿಕೊಳ್ಳತಕ್ಕದ್ದು.
7. ಆಯ್ಕೆಯ ಸಂಬಂಧವಾಗಿ ಸಂದರ್ಶನಕ್ಕೆ ಅನರ್ಹರಾದ ಅಭ್ಯರ್ಥಿಗಳು ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.
8. ಅಭ್ಯರ್ಥಿಗಳು ಅರ್ಜಿಯ 6ನೇ ಕಾಲಂ ಭರ್ತಿ ಮಾಡುವ ಸಮಯದಲ್ಲಿ ದೂರವಾಣಿ/ ಮೊಬೈಲ್ ಸಂಖ್ಯೆಯನ್ನು ನಮೂದಿಸಿವುದು.

ಸ್ಥಳ: ಚಿಕ್ಕಬಳ್ಳಾಪುರ

ದಿನಾಂಕ: 19.02.2013

**ಎಸ್. ವೈ. ಈರಣ್ಣವರ್,**
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಚಿಕ್ಕಬಳ್ಳಾಪುರ

**ಅರ್ಜಿ ನಮೂನೆ**

ದೂರವಾಣಿ ಸಂಖ್ಯೆ:08156–270966

ಸ್ವದೃಢೀಕರಿಸಿದ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅಂಟಿಸಬೇಕು.

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಚಿಕ್ಕಬಳ್ಳಾಪುರ ಜಿಲ್ಲೆ,
ಚಿಕ್ಕಬಳ್ಳಾಪುರ –ಇವರಿಗೆ
ಮಾನ್ಯರೇ,

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಅಧಿಸೂಚನೆ ಸಂಖ್ಯೆ: **01/2013 ದಿನಾಂಕ: 19.02.2013** ರ ಪ್ರಕಾರ ನಾನು ಕೆಳಕಂಡ ಮಾಹಿತಿಗಳೊಂದಿಗೆ ______________________ ಹುದ್ದೆಗೆ ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸುತ್ತಿದ್ದೇನೆ.

<table>
<tr><td>01</td><td>ಅಭ್ಯರ್ಥಿಯ ಹೆಸರು<br>(ದಪ್ಪ ಅಕ್ಷರಗಳಲ್ಲಿ)</td><td colspan="4"></td></tr>
<tr><td>02</td><td>ತಂದೆ / ಗಂಡನ ಹೆಸರು</td><td colspan="4"></td></tr>
<tr><td>03</td><td>ತಾಯಿಯ ಹೆಸರು</td><td colspan="4"></td></tr>
<tr><td>04</td><td>ಜನ್ಮ ದಿನಾಂಕ</td><td colspan="4"></td></tr>
<tr><td rowspan="2">05</td><td rowspan="2">ವಯಸ್ಸು<br>(ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು)</td><td>ವರ್ಷಗಳು</td><td>ತಿಂಗಳುಗಳು</td><td colspan="2">ದಿನಗಳು</td></tr>
<tr><td></td><td></td><td colspan="2"></td></tr>
<tr><td>06</td><td>ಅಭ್ಯರ್ಥಿಯ ಖಾಯಂ ವಿಳಾಸ ಮತ್ತು ದೂರವಾಣಿ / ಮೊಬೈಲ್ ಸಂಖ್ಯೆ:</td><td colspan="4"></td></tr>
<tr><td rowspan="9">07</td><td>ಶೈಕ್ಷಣಿಕ ವಿದ್ಯಾರ್ಹತೆ<br>(ಅನ್ವಯಿಸುವ ವಿದ್ಯಾರ್ಹತೆಯ ಅಂಕಣಗಳನ್ನು ಮಾತ್ರ ಭರ್ತಿ ಮಾಡುವುದು)<br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು</td><td>ಉತ್ತೀರ್ಣ ಹೊಂದಿದ ವರ್ಷ</td><td>ಗರಿಷ್ಠ ಅಂಕಗಳು</td><td>ಗಳಿಸಿದ ಅಂಕಗಳು</td><td>ಶೇಕಡಾವಾರು ಅಂಕಗಳು</td></tr>
<tr><td>ಏಳನೇ ತರಗತಿ</td><td></td><td></td><td></td><td></td></tr>
<tr><td>ಎಸ್‌ಎಸ್‌ಎಲ್‌ಸಿ</td><td colspan="4"></td></tr>
<tr><td>ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ)</td><td colspan="4"></td></tr>
<tr><td>ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ)</td><td colspan="4"></td></tr>
<tr><td>ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ)</td><td colspan="4"></td></tr>
<tr><td>ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣಿ)</td><td colspan="4"></td></tr>
<tr><td>ಇತರೆ ವಿದ್ಯಾರ್ಹತೆ</td><td colspan="4"></td></tr>
</table>

| | | | | | | |
|---|---|---|---|---|---|---|
| 08 | ಲಿಂಗ | ಪುರುಷ / ಮಹಿಳೆ | | | | |
| 09 | ರಾಷ್ಟ್ರೀಯತೆ ಮತ್ತು ಧರ್ಮ | | | | | |
| 10 | ಜಾತಿ / ಉಪಜಾತಿ | | | | | |
| 11 | ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೇ? | | | | | |
| 12 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರಾ? | | | | | |
| 13 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರೂ ಸೇವೆಯಿಂದ ವಜಾ ಆಗಿದ್ದೀರಾ ಅಥವಾ ತೆಗೆದುಹಾಕಲ್ಪಟ್ಟಿದ್ದೀರಾ? | | | | | |
| 14 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ? (ಸರ್ಕಾರಿ ಸೇವೆಯಲ್ಲಿದ್ದಲ್ಲಿ , ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣಾ ಪತ್ರದ ಪ್ರತಿಯನ್ನು ಕಡ್ಡಾಯವಾಗಿ ಲಗತ್ತಿಸಬೇಕು) | ಹೌದು ( ) | | ಇಲ್ಲ ( ) | | |
| 15 | ಕೋರುವ ಮೀಸಲಾತಿಗಳು (ಕೋರುವ ಮೀಸಲಾತಿಯನ್ನು (✓) ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ–1 | |
| | | | | | | |
| | | 2–ಎ | 2–ಬಿ | 3–ಎ | 3–ಬಿ | |
| | | | | | | |
| 16 | ನೀವು ಈ ಯಾವುದಾದರೂ ಮೀಸಲಾತಿ ಅಡಿಯಲ್ಲಿ ಬರುತ್ತೀರಾ? (ಸೇರುವ ಮೀಸಲಾತಿಯನ್ನು (✓) ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಗ್ರಾಮೀಣ | ಕ.ಮಾ.ಅ | ಮಾ.ಸೈ | ಅಂ.ವಿ.ಅ | ಯೋ.ನಿ.ಅ |
| | | | | | | |

**ಸೂಚನೆ:– ಅಭ್ಯರ್ಥಿಗಳು ಸಂಬಂಧಿಸಿದ ಎಲ್ಲಾ ಕಾಲಂಗಳನ್ನು ಕಡ್ಡಾಯವಾಗಿ ಭರ್ತಿ ಮಾಡತಕ್ಕದ್ದು.**

**:: ಘೋಷಣೆ ::**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ಸತ್ಯವಾಗಿದ್ದು ಒಂದು ವೇಳೆ ಅವು ಅಸತ್ಯವೆಂದು ಕಂಡುಬಂದಲ್ಲಿ ತಾವು ತೆಗೆದುಕೊಳ್ಳುವ ತೀರ್ಮಾನಗಳಿಗೆ ಬದ್ಧನಾಗಿರುತ್ತೇನೆ / ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡ ಪಕ್ಷದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿರುತ್ತೇನೆ / ಸಿದ್ಧಳಿರುತ್ತೇನೆ.

ಸ್ಥಳ:

ದಿನಾಂಕ: **ಅಭ್ಯರ್ಥಿಯ ಸಹಿ.**

**P.R. 21**

**BEFORE THE HONOURABLE IV ADDITIONAL CITY CIVIL JUDGE, MAYO HALL, BANGALORE**

**P & SC.No. 25004/2013 HG : 9-4-2013**

**Petitioners :**

**(1) MRS. JACINTHA MATHEW,** W/o Late Mathew K.A. aged about 52 years, permanently residing at No. 361, 8th Main, 4th Cross, Viveknagar Layout, Bangalore-560 047.

**(2) MR. VIVIAN AUGUSTINE MATHEW,** S/o Late Mathew K.A. aged about 24 years, Permanently residing at No. 361, 8th Main, 4th **Corss**, Viveknagar Layout, Bangalore-560 047 and presently at "ADVANTAGE" No. 216/B, 6th Cross, 2nd Main Indiranagar 1st Stage, Bangalore-560 038, Represented by his mother and Power of Attorney Holder Mrs. Jacintha Mathew.

**(3) MR. ALLAN MATHEW,** S/o Late Mathew K.A. aged about 20 years, Permanently residing at No. 361, 8th Main, 4th Cross, Viveknagar **Layout**, Bangalore-560 047.

**Versus**

**Respondents :** Nil

**PUBLIC NOTICE**

Notice is hereby given that a petition has been made to this Court under Part IX Chapter IV, Section 278 of the Indian Succession Act, 1925, for grant of Letter of Administration of the Will dated 2-2-1998 of Mr. K.V. Augustine (Deceased) who expired on 26-4-2003 at Bangalore.

Be it known that no Caveat has been entered and the said petition is posted for hearing on 9-4-2013 at 11 O'Clock. Any person/s claiming to have any interest may come and participate in the proceedings before the grant of Letter of Administration.

**SCHEDULE**

IMMOVABLE PROPERTY

Immovable property being Corporation No. 361, 8th Main, 4th Cross, Viveknagar Layout, Bangalore-560 047 bearing **BBMP Property ID No. 71-9-361** and measuring East to West 30 feet and North to Sourth 46-7/8ft in all measuring **1406.25 square feet** together with a residential house standing thereon consisting of ground floor measuring 800 Square feet and first floor measuring 400 square feet and bounded on the East by : Site No. 360, West by : Site No. 362 : North by : Site No. 346 and South by : Road (8th Main).

MOVABLE PROPERTY

Household goods and appliances, furniture, wearing apparel, plates, jewels, electronic items, etc.

Given under my hand and seal of the Court, this the 14th day of February. Two Thousand and Thirteen.

By Order of the Court
**Assistant Registrar,**
City Civil Court, Mayo Hall Unit,
Bangalore

**P.D. 18**

**ಕರ್ನಾಟಕ ಲೋಕಸೇವಾ ಆಯೋಗ, "ಉದ್ಯೋಗ ಸೌಧ", ಬೆಂಗಳೂರು–560001**

**ತಿದ್ದುಪಡಿ ಅಧಿಸೂಚನೆ**

**ಸಂಖ್ಯೆ : ಆರ್(1) 3546/2012–13/ಪಿಎಸ್, ಬೆಂಗಳೂರು, ದಿನಾಂಕ : 14–2–2013**

**ಉಲ್ಲೇಖ :** ಆಯೋಗದ ಅಧಿಸೂಚನೆ ಸಂಖ್ಯೆ : ಆರ್ (2) 310/2012–13/ಪಿಎಸ್‌ಪಿ, ದಿನಾಂಕ : 9–1–2013.

ಉಲ್ಲೇಖಿತ ಆಯೋಗದ ಅಧಿಸೂಚನೆಯ ಹುದ್ದೆಗಳ ಕ್ರಮ ಸಂಖ್ಯೆ 08 ರಲ್ಲಿ ವಾರ್ತಾ ಇಲಾಖೆಯ ಗ್ರೂಪ್–ಎ ಹುದ್ದೆಯಾದ 05 ಹಿರಿಯ ಸಹಾಯಕ ನಿರ್ದೇಶಕರ ಹುದ್ದೆಗಳನ್ನು ಅಧಿಸೂಚಿಸಿದ್ದು, ಈ ಹುದ್ದೆಗಳನ್ನು ತಾಂತ್ರಿಕ ಹುದ್ದೆಗಳೆಂದು ತಿಳಿಸಿ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು, 2006 ರಂತೆ ಈ ಹುದ್ದೆಗಳ ನೇಮಕಾತಿಯನ್ನು ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದೆಂದು ತಿಳಿಸಿ, ಅಧಿಸೂಚನೆಯ ಕಂಡಿಕೆ 5.2 ರಲ್ಲಿ ಆಯ್ಕೆ ವಿಧಾನವನ್ನು ಕೆಳಕಂಡಂತೆ ತಿಳಿಸಲಾಗಿತ್ತು.

5.2 ಭಾಗ–1 ಗ್ರೂಪ್–ಎ, ಬಿ ಮತ್ತು ಸಿ ತಾಂತ್ರಿಕ ಹುದ್ದೆಗಳ ನೇಮಕಾತಿ ವಿಧಾನ

(ಸಂದರ್ಶನದ ಮೂಲಕ ಆಯ್ಕೆ) :–

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಅರ್ಹರಾದ ನಂತರ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ ಉಪನಿಯಮ 6ರನ್ವಯ ಅಭ್ಯರ್ಥಿಗಳನ್ನು ಅವರು ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡವಾರು ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ 1:3 ಅನುಪಾತದಲ್ಲಿ ಸಂದರ್ಶನಕ್ಕೆ ಆಹ್ವಾನಿಸಲಾಗುವುದು. ಅಭ್ಯರ್ಥಿಗಳು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

ಸಂದರ್ಶನ ನಡೆಸುವ ಉದ್ದೇಶ ಎಂದರೆ ಅಭ್ಯರ್ಥಿಗಳು ಆಯ್ಕೆ ಬಯಸಿದ ಹುದ್ದೆಗೆ ಅವರ ಅರ್ಹತೆ, ವ್ಯಕ್ತಿತ್ವ, ಸಂಬಂಧಿತ ವಿಷಯದಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯತೆ, ಸೂಕ್ಷ್ಮತೆ ಮತ್ತು ಕರ್ತೃತ್ವ ಶಕ್ತಿ, ಸಾಮಾನ್ಯ ಜ್ಞಾನ ಹಾಗೂ ವಿಷಯದಲ್ಲಿನ ಪರಿಜ್ಞಾನ ಹಾಗೂ ಇನ್ನಿತರ ವಿಶೇಷ ಗುಣಗಳನ್ನು ನಿರ್ಧರಿಸುವುದಾಗಿದ್ದು, ಅಭ್ಯರ್ಥಿಗಳು ಆಯಾ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಗಳಿಸಿದ ಶೇಕಡವಾರು ಅಂಕಗಳ ಮತ್ತು ಆಯೋಗವು ನಡೆಸುವ ಸಂದರ್ಶನದಲ್ಲಿ ಗಳಿಸಿದ ಅಂಕಗಳ ಜೇಷ್ಠತೆಯ ಆಧಾರದ ಮೇಲೆ ಹಾಗೂ ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳನ್ವಯ ಆಯ್ಕೆ ಮಾಡಲಾಗುವುದು.

ಸಂದರ್ಶನಕ್ಕೆ ನಿಗದಿಪಡಿಸಲಾದ ಗರಿಷ್ಠ ಅಂಕಗಳು 15 (ಹದಿನೈದು)

ಆದರೆ ಈ ಹುದ್ದೆಗೆ ನಿಗದಿಪಡಿಸಿರುವ ವಿದ್ಯಾರ್ಹತೆಯು ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು, 2006 ರಲ್ಲಿ ಪರಿಭಾಷಿಸಲಾದ ತಾಂತ್ರಿಕ ಹುದ್ದೆಯಡಿ ಬರುವುದಿಲ್ಲವಾದ್ದರಿಂದ ಇವು ತಾಂತ್ರಿಕೇತರ ಹುದ್ದೆ ಎಂದು ಪರಿಗಣಿಸಿ ಈ ಹುದ್ದೆಗಳ ನೇಮಕಾತಿ ವಿಧಾನವನ್ನು ಕೆಳಕಂಡಂತೆ ಮಾಡಲಾಗುವುದೆಂದು ಸಂಬಂಧಪಟ್ಟವರ ಗಮನಕ್ಕೆ ಈ ಮೂಲಕ ತರಲಾಗಿದೆ :–

**ವಾರ್ತಾ ಇಲಾಖೆಯ 05 ಹಿರಿಯ ಸಹಾಯಕ ನಿರ್ದೇಶಕರ ಹುದ್ದೆಗಳ ನೇಮಕಾತಿ ವಿಧಾನ :–**

**ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಸಂದರ್ಶನ ಮೂಲಕ ಆಯ್ಕೆ**

**ಸ್ಪರ್ಧಾತ್ಮಕ ಪರೀಕ್ಷಾ ವಿಧಾನ :** ಸ್ಪರ್ಧಾತ್ಮಕ ಪರೀಕ್ಷೆಯು ಕೆಳಕಂಡ ಎರಡು ಪತ್ರಿಕೆಗಳನ್ನೊಳಗೊಂಡಿದ್ದು ವಸ್ತು ನಿಷ್ಠ ಬಹು ಆಯ್ಕೆ (Objective Multiple Choice) ಮಾದರಿಯದಾಗಿರುತ್ತದೆ.

**ಪತ್ರಿಕೆ – 1 (ಸಾಮಾನ್ಯ ಪತ್ರಿಕೆ) (General Paper) 200 ಅಂಕಗಳು–1 $^{1}/_{2}$ ಘಂಟೆ**

(ನಿಗದಿಪಡಿಸಿದ ಅರ್ಹತಾ ಪರೀಕ್ಷೆಯಲ್ಲಿ ಉತ್ತೀರ್ಣನಾದ ಒಬ್ಬ ವ್ಯಕ್ತಿಯಿಂದ ನಿರೀಕ್ಷಿಸಬಹುದಾದ ಸಾಮಾನ್ಯ ಜ್ಞಾನಕ್ಕೆ ಸಂಬಂಧಪಟ್ಟ ವಿಷಯಗಳಾದ ಪ್ರಚಲಿತ ವಿದ್ಯಮಾನಗಳು, ಸಾಮಾನ್ಯ ವಿಜ್ಞಾನಗಳು, ಭಾರತದ ಇತಿಹಾಸ, ಭಾರತದ ಭೂಗೋಳ, ಸಮಾಜ ವಿಜ್ಞಾನ, ಪ್ರತಿ ದಿನ ಗಮನಿಸುವ ವಿಷಯಗಳು, ಪ್ರಯೋಗಿಕ ಜ್ಞಾನ ಮತ್ತು ಸಾಮಾನ್ಯ ಬೌದ್ಧಿಕ ಸಾಮರ್ಥ್ಯಗಳನ್ನು ಒಳಗೊಂಡಿರುವ ಸಾಮಾನ್ಯ ಪತ್ರಿಕೆ).

ಪತ್ರಿಕೆ – 2 (ನಿರ್ದಿಷ್ಟ ಪತ್ರಿಕೆ) (Specific Paper) –200 ಅಂಕಗಳು – 2 ಘಂಟೆ

ಸೂಚನೆ –1) ಕನ್ನಡ ಕಡ್ಡಾಯ ಭಾಷಾ ಪರೀಕ್ಷೆ ಹಾಗೂ ಸ್ಪರ್ಧಾತ್ಮಕ ಪರೀಕ್ಷೆ ಬಗ್ಗೆ ಪಠ್ಯಕ್ರಮವನ್ನು ಆಯೋಗದ ವೆಬ್ ಸೈಟ್ "http:/kpsc.kar.nic.in/SYLLABUS" ನಲ್ಲಿ ಬಿತ್ತರಿಸಲಾಗುವುದು.

ಸ್ಪರ್ಧಾತ್ಮಕ ಪರೀಕ್ಷೆಯ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲೂ ಇರುತ್ತವೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಅಭ್ಯರ್ಥಿಗಳು ಆಂಗ್ಲ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು.

ಟಿಪ್ಪಣಿ :– ಪ್ರಶ್ನೆ ಪತ್ರಿಕೆ ಬಗ್ಗೆ ಯಾವುದೇ ಬಗೆಯ ಆಕ್ಷೇಪಣೆ ಇದ್ದಲ್ಲಿ, ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಪರೀಕ್ಷಾ ದಿನವೇ ಸಂಬಂಧಿತ ಮೇಲ್ವಿಚಾರಕರ ಮುಖಾಂತರ ಅಭ್ಯರ್ಥಿಯ ಹೆಸರು, ವಿಳಾಸ, ನೋಂದಣಿ ಸಂಖ್ಯೆ ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ಆಯೋಗಕ್ಕೆ ಸಲ್ಲಿಸಿ ಸ್ವೀಕೃತಿ (Acknowledgement) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ.

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಅರ್ಹರಾದ ನಂತರ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ ಉಪನಿಯಮ 6(ಬಿ)ರನ್ವಯ ಅಭ್ಯರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡವಾರು ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ 1:3 ಅನುಪಾತದಲ್ಲಿ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಹ್ವಾನಿಸಲಾಗುವುದು. ಅಭ್ಯರ್ಥಿಗಳು ಪರೀಕ್ಷೆಗೆ/ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

**ಸಂದರ್ಶನಕ್ಕೆ ನಿಗದಿಪಡಿಸಿದ ಗರಿಷ್ಟ ಅಂಕಗಳು :–** ಸ್ಪರ್ಧಾತ್ಮಕ ಪರೀಕ್ಷೆಗೆ ನಿಗದಿಪಡಿಸಿದ ಒಟ್ಟು ಅಂಕಗಳ ಶೇಕಡ 12.5 ರಷ್ಟು ಸಂದರ್ಶನಕ್ಕೆ ನಿಗದಿಪಡಿಸಿದ ಗರಿಷ್ಠ ಅಂಕಗಳಾಗಿರುತ್ತವೆ. ಆಯೋಗವು ನಿಯಮಾನುಸಾರ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸಿದ ಅಂಕಗಳ ಶೇಕಡವಾರರ ಜ್ಯೇಷ್ಠತೆಯನ್ನು ಆಧರಿಸಿ ಹಾಗೂ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಹುದ್ದೆಗಳ ನೇಮಕಾತಿಗಾಗಿ ಇರುವ ಮೀಸಲಾತಿಯನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುತ್ತದೆ.

**ಕೆ.ಆರ್. ಸುಂದರ್**
ಕಾರ್ಯದರ್ಶಿ,
ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು.

**P.R. 19**

## EXECUTIVE DIRECTOR, BANNERGHATTA BIOLOGICAL PARK,
### BANNERGHATTA, BANGALORE-83
### Expression of Interest (EoI) Notification
### No. A4/BBP/Train Safari/CR-1/2012-13, dated : 7-2-2013.

It is hereby notified for the general information to the public that sealed Expression of Interests are invited and will be received by the Executive Director, Bannerghatta Biological Park, Bangalore or any other officer duly authorized by him for "Expression of Interest ot Build Operate and Transfter (BOT) Train Safari on Revenue sharing basis at Bannerghatta Biological Park"

THE SCHEDULED DATES AND TIMES

1. The Expression of Interests documents will be available in the office of the undersigned during the office hours from 27-2-2013 to 4-3-2013 on payment of Rs. 10,000/- (including taxes).
2. Last date for receipt of sealed Expression of Interests documents is from 10:00 AM to 3:00 PM on 4-3-2013. No Expression of Interests documents will be received after 3:00 P.M. on 4-3-2013.

| Sl. No. | Event | Schedule Date |
|---|---|---|
| 1. | Release of EOI to the Website | 5-2-2013 |
| 2. | Last Date for submission of responses to EOI | 4-3-2013 |
| 3. | Opening of technical bids | 6-3-2013 |
| 4. | Presentation of demonstration about the project | 8-3-2013 |

| Sl. No. | Event | Schedule Date |
|---|---|---|
| 5. | Intimation of short listed agency/companies after technical evaluation | 11-3-2013 |
| 6. | Opening of commercial bids of only the short listed technical bidders | 14-3-2013 |

**CONDITIONS :**

1. The tender accepting authority reserves the right to accept or reject any or all Expression of Interests without incurring any liability or obligation to inform the applicants of the reasons for such action.
2. The Expression of Interests should be accompanied with EMD of Rs. 2,50,000/- (Rupees Two lakhs fifty thousand only) which shall be in the form of Demand Draft from Nationalized Bank of Scheduled Approved banks as noted in the schedule of the Reserve Bank of India. The DD Should be in favour of "The Executive Director, Bannerghatta Biological Park, Bangalore-560083". DD in the form of Xerox copy shall not bew accepted at any cost and shall stand rejected.
3. Fee Receipt copy of EOI documents purchased should be submitted at time of EOI submission.
4. Any Expression of Interests submitted without the earnest money deposit (EMD) shall summarily rejected.
5. Finalization of EOI is subject to the formal government approvals.
6. Other detailed conditions can be had from the office of the undersigned during the office hours on all working days.

**Executive Director,**
Bannerghatta Biological Park,
Bannerghatta, Bangalore-83

**PD. 19**

## IN THE COURT OF IV ADDITIONAL CITY CIVIL JUDGE, AT BANGALORE-CCH-21
## P & SC.No. 25060/2012

**BETWEEN :**

**(1)** ARVIND S. GOUDAR, son of late Siddannagouda Bharamgouda Goudar and late Smt. Dr. Indira S. Jayangoudar, aged about 55 years, presently residing at 5, Emmons Drive, Millstone Township, New Jersey 08510 U.S.A.

**(2)** JAIDEV S. GOUDAR, son of late Siddannagouda Bharamgouda Goudar and late Smt. Dr. Indira S. Jayangoudar, aged about 54 years, presently residing at 4, Baylor Place, West Windosor, New Jersey 08510 U.S.A.

**(3)** Mrs. JYOTI AMARNATH REDDI, aged 52 Years, wife of Bommi Reddi Amarnath Reddi, daughter of late Smt. Dr. Indira S. Jayangoudar and late Sri Siddannagouda Bharamgouda Goudar residing at No. 11, Ist Main, 4th Cross, A.E.C.S. III Stage, Bangalore-560094.

1, 2 and 3 are represented by their special Power of Attorney holder Mr. ASHOK G. PATIL, son of Gangadhar H. Patil, aged 43 years, residing at No. 78, R.M.S. Layout, 4th Cross, Sanjaynagar, Bangalore-560094. **….. PETITIONERS**

AND

Nil …. **RESPONDENT**

**NOTICE**

WHEREAS the Petitioners have made an application Under Section 372 of the Indian Succession Act for grant of Succession Certificate in favour of the Petitioner No. 3 and also for and on behalf of Petitioner No. 1 and 2 in respect of the amount mentioned in RM Schedule hereunder of the deceased Dr. Indira S. Jayan Goudar, who died on 5-1-2012.

Be it known that no caveat has been entered and that the said petition is posted for hearing on 19-3-2013 and any person claiming to have any interest in the estate of the deceased may come and see the proceedings before the grant of Succession Certificate.

**SCHEDULE**

(i) Rs. 1,03,171-00 (Rupees one lakh three thousand one hundred seventy one only) Medical expenses incurred from 6-12-2011 to 17-12-2011 for undergoing treatment in Poona Hospital and Research Centre, Poona, by the Petitioners mother Dr. Indira S. Jayangoudar (late), (Medical claim from NAL).

(ii) Rs. 2,31,528-00 (Rupees two lakhs thirty one thousand five hundred twenty eight only) Medical expenses incurred from 26-12-2011 to 5-1-2012 for undergoing treatment in Poona Hospital and Research Centre, Poona by the Petitioners mother Dr. Indira S. Jayangoudar (late), (Medical claim from NAL).

Given under my hand and seal of this Court on this the 15th day of February 2013.

By Order of the Court
**Assistant Registrar,**
City Civil Court, Mayo Hall Unit, Bangalore

**P.D. 20**

**EXECUTIVE DIRECTOR, BANNERGHATTA BIOLOGICAL PARK,**

**BANNERGHATTA, BANGALORE-83**

**E-TENDER NOTIFICATION**

**No. A4/BBP/e-Tender/S.Guards/CR-1/2012-13, dated : 11-2-2013.**

It is hereby notified for the general information to the public that the Executive Director, Bannerghatta Biological Park, Bangalore herein after referred as Tender Inviting Authority, has invited short term re e-Tender for "Providing Security Personnel for one year" i.e. for the year 2013-14 as detailed in the in the schedule.

| SCHEDULE OF EVENTS | | |
|---|---|---|
| 1. | Tender documents will be available in e-procurement portal | 14-2-2013 onwards |
| 2. | Last Date and time for tender quarries and clarifications (over phone during office hours) | 13-3-2013 |
| 3. | Last date and time for Uploading bid documents in e-procurement portal (www.eproc.karnataka.gov.in) up to 4.00 P.M. | 15-3-2013 up to 4.00 P.M. |
| 4. | Last date and time for opeing of tender at 11.30 AM in the Office of the Executive Director, Bannerghatta Biological Park, Bangalore-560 083 | 19-3-2013 at 11:30 AM |

**Schedule**

| Sl. No. | Particulars | Amount put to tender (Rs. In Lakhs) | EMD to be furnished (Rs. In Lakhs) | Tender Processing fees (Rs.) (including all taxes |
|---|---|---|---|---|
| 1. | Providing Security Personnel to Bannerghatta Biological Park, Bangalore.<br>1. Assistant Security Officer - 02 Nos.<br>2. Security Guards - 23 Nos. | Rs. 25.00 Lakhs | Rs. 2.50 Lakhs | As per e-procurement portal |

**CONDITIONS :**

1. The tender accepting authority reserves the right to accept or reject any or all tenders without incurring any liability or obligation to inform the applicants of the reasons for such action.
2. The tender should be accompanied with EMD of Rs. 2.50 lakhs (Rupees Two lakhs fifty thousand only) should be paid throught e-Procurement portal (Mode of Payment-Credit Card/Debit Card/NEFT/OTC).
3. Any tender submitted without the earnest money depost (EMD) shall summarily rejected.
4. Sl. No. 1 to be necessity the ex-army persons and for Sl. No. 2 the personals in good health and physically fit and aged within 50 years are preferred.
5. The participating security agency shall be the licensed security servicing agency from the competent authority.
6. Further details can be had from undersigned during office hours and also refer website www.eproc.karnataka.gov.in. The tenderers need to be registered in e-procurement cell, Room No. 141, Room No. 141, Gate No. 2 1st Floor, M.S. Building, Bangalore to obtain user ID and Password for participating in e-Tender. For more details please contact e-procurement cell-080-25501216/25501227.

**Dr. R. Raju,**
Executive Director,
Bannerghatta Biological Park,
Bannerghatta, Bangalore

**P.D. 21**

**FORM-IV**

**(SEE RULE-12)**

**NOTICE**

It is hereby notified that the undersigned has changed his/her name from **PATEL PANDU. to PATEL PANDU. B.M.**

**P.D.c/n 20** **PATEL PANDU**

**FORM-IV**

**(SEE RULE-12)**

**NOTICE**

It is hereby notified that the undersigned has changed his/her name from **ABDULRAZAK. DASTAGIR. ALGUR to RAZAK. DASTAGIR. ALGUR.**

**P.D.c/n 21** **ABDULRAZAK. DASTAGIR. ALGUR**

**ನಮೂನೆ-1**

**9ನೇ ನಿಯಮ ನೋಡಿ**

**ಅಧಿಸೂಚನೆ**

ಶ್ರೀ ಅಶೋಕ ನಿಂಗಪ್ಪ ಹಡಪದ ಸಿಪಿಸಿ 642 ಎಂದು ಪೊಲೀಸ್ ಇಲಾಖೆಯ ನವಲಗುಂದ ಪೊಲೀಸ್ ಠಾಣೆಯಲ್ಲಿ ಕೆಲಸ ಮಾಡುತ್ತಿರುವ ಅವರ ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ. ಈ ಹೆಸರಿಗೆ **"ಅಶೋಕ ನಿಂಗಪ್ಪ ನಾಗರಹಳ್ಳಿ"**

**ಪೊಲೀಸ್ ಅಧೀಕ್ಷಕರು,**
ಧಾರವಾಡ ಜಿಲ್ಲೆ, ಧಾರವಾಡ

**PD. c/n 22**

**ನಮೂನೆ-1**

**9ನೇ ನಿಯಮ ನೋಡಿ**

**ಅಧಿಸೂಚನೆ**

ಶ್ರೀ ಗುರುಶಿದ್ದಪ್ಪ ಶಿದ್ದಪ್ಪ ಸಣ್ಣಶಿರೂರ ಸಿಪಿಸಿ 558 ಎಂದು ಪೊಲೀಸ್ ಇಲಾಖೆಯ ನವಲಗುಂದ ಪೊಲೀಸ್ ಠಾಣೆಯಲ್ಲಿ ಕೆಲಸ ಮಾಡುತ್ತಿರುವ ಅವರ ಹೆಸರು ಬದಲಾವಣೆಗೆ ಅನುಮತಿ ನೀಡಲಾಗಿದೆ. ಈ ಹೆಸರಿಗೆ **"ಗುರುಶಿದ್ದಪ್ಪ ಶಿದ್ದಪ್ಪ ಶಿರೂರ"**

**ಪೊಲೀಸ್ ಅಧೀಕ್ಷಕರು,**
ಧಾರವಾಡ ಜಿಲ್ಲೆ, ಧಾರವಾಡ

**PD. c/n 23**

**FORM-IV**

**(SEE RULE-12)**

**NOTICE**

It is hereby notified that the undersigned has changed his/her name from **NAGAPPA C. GIRANIWADDAR to NAGAPPA. C. DODAMANI**

**P.D.c/n 24** **NAGAPPA C. GIRANIWADDAR**

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ನಂ. ಸಿಬ್ಬಂದಿ(2) ಸಿಆರ್ 15/2012-13, ದಿನಾಂಕ 13/02/2013**

**ವಿಷಯ:** ಕೋಲಾರ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇದ್ದ ಕಂದಾಯ ವೃತ್ತದ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ ಆರ್‌ಡಿ 299 ಬಿಎಸ್‌ಸಿ 2006 ದಿನಾಂಕ 3/2/2009.
2. ಸರ್ಕಾರದ ಆದೇಶ ನಂ. ಆರ್‌ಡಿ 33 ಡಿಎಸ್‌ಪಿ 2012 ದಿನಾಂಕ 5/6/2012
3. ಈ ಕಛೇರಿಯ ಸಮಸಂಖ್ಯೆಯ ಅಧಿಸೂಚನೆ ದಿನಾಂಕ 29/06/2012.
4. ಈ ಕಛೇರಿಯ ಸಮಸಂಖ್ಯೆಯ ಅಧಿಸೂಚನೆ ದಿನಾಂಕ 10/10/2012 ರನ್ವಯ ಪ್ರಕಟಿಸಲಾದ ಗ್ರಾಮಲೆಕ್ಕಿಗರ (ಕಂ.ವೃತ್ತ) ಅಂತಿಮ ಆಯ್ಕೆ ಪಟ್ಟಿ.

**ಅಧಿಕೃತ ಜ್ಞಾಪನ**

ಕೋಲಾರ ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇದ್ದ ಕಂದಾಯ ವೃತ್ತದ 41 ಗ್ರಾಮಲೆಕ್ಕಾಧಿಕಾರಿಗಳ (ಕಂ.ವೃತ್ತ) ಹುದ್ದೆಗಳನ್ನು ನೇರನೇಮಕಾತಿ ಮೂಲಕ ತುಂಬಲು ಉಲ್ಲೇಖ (1) ರ ಅಧಿಸೂಚನೆ ಹಾಗೂ ಉಲ್ಲೇಖ (2) ರ ಆದೇಶದಲ್ಲಿ ನೀಡಿರುವ ಸೂಚನೆಗಳ ಮೇರೆಗೆ ಕ್ರಮವಹಿಸಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಉಲ್ಲೇಖ (4) ರಂತೆ ಅಂತಿಮ ಆಯ್ಕೆಪಟ್ಟಿಯನ್ನು ಹೊರಡಿಸಲಾಗಿರುತ್ತದೆ.

ಸಾಮಾನ್ಯ ವರ್ಗದಡಿ ಆಯ್ಕೆಯಾದ ಅಭ್ಯರ್ಥಿಗಳ ಗುಣ ಮತ್ತು ನಡತೆ, ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರದ ಬಗ್ಗೆ ಹಾಗೂ ವಿವಿಧ ಮೀಸಲಾತಿ ಪ್ರವರ್ಗಗಳಡಿ ಆಯ್ಕೆಯಾದ ಅಭ್ಯರ್ಥಿಗಳ ಸಿಂಧುತ್ವ ಪ್ರಮಾಣಪತ್ರಗಳನ್ನು ಸಲ್ಲಿಸುವಂತೆ ಸಂಬಂಧಪಟ್ಟ ಜಿಲ್ಲೆಗಳ ಅಧಿಕಾರಿಗಳಿಗೆ ಕೋರಲಾಗಿ, ಕೆಲವು ಅಭ್ಯರ್ಥಿಗಳ ಗುಣ ಮತ್ತು ನಡತೆ ಪತ್ರಗಳ ಹಾಗೂ ಸಿಂಧುತ್ವ ಪತ್ರಗಳು ಸ್ವೀಕೃತವಾಗಿದ್ದು, ಇನ್ನು ಕೆಲವು ಅಭ್ಯರ್ಥಿಗಳ ಪರಿಶೀಲನಾ ಪತ್ರಗಳ ಸ್ವೀಕೃತಗೊಳ್ಳಬೇಕಾಗಿದ್ದು, ಸ್ವೀಕೃತಿಗೊಂಡ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಷರತ್ತುಗಳಿಗೊಳಪಡಿಸಿ, ಗ್ರಾಮಲೆಕ್ಕಿಗರ ಹುದ್ದೆಯ

ವೇತನ ಶ್ರೇಣಿ ರೂ. 11600–200–12000–250–13000–300–14200–350–15600–400–17200–450–19000–500–21000ರಲ್ಲಿ ಮೂಲವೇತನ ರೂ. 11600 ಹಾಗೂ ಇತರೆ ಭತ್ಯೆಗಳನ್ವಯ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗೆ ನೇಮಕ ಮಾಡಿ ಅವರ ಹೆಸರುಗಳ ಮುಂದೆ ನಮೂದಿಸಿರುವ ಸ್ಥಳಗಳಿಗೆ ನಿಯುಕ್ತಿಗೊಳಿಸಿ ಆದೇಶಿಸಿದೆ.

| ಕ್ರ. ಸಂ. | ಅಭ್ಯರ್ಥಿ ಹೆಸರು ಹಾಗೂ ವಿಳಾಸ | ನಿಯುಕ್ತಿಗೊಳಿಸಿರುವ ಸ್ಥಳ | ಕರ್ತವ್ಯಕ್ಕೆ ಹಾಜರಾಗಬೇಕಾದ ತಹಶೀಲ್ದಾರ್ ಕಛೇರಿ |
|---|---|---|---|
| 1 | 2 | 3 | 4 |
| 1 | ಮೋಹನ್ ಶ್ರೀವತ್ಸ ಹೆಚ್.ಆರ್.<br>ಬಿನ್ ರಾಮಮೂರ್ತಿ ಹೆಚ್.ಕೆ.<br>ಹೆಚ್.ಕೆ. ಮರಿಚಿನ ಲೇಔಟ್, ನಂ.1008, ವಿಜಯಪುರ,<br>ದೇವನಹಳ್ಳಿ ತಾ:–562135 | ನಂಬಿಹಳ್ಳಿ ಕಂ.ವೃ.<br>ಶ್ರೀನಿವಾಸಪುರ ತಾ: | ಶ್ರೀನಿವಾಸಪುರ |
| 2 | ಸುರೇಖಾ ಎಂ. ಬಿನ್ ಮುನಿಯಪ್ಪ<br>ಡಿಜಿಕ್ಯೂಎ. ವಸತಿ ಸಂಕೀರ್ಣ, ಗುಂಟವಿಹಾರ, ಜೆ.ಸಿ.ನಗರ (ಅಂಚೆ) ಬೆಂಗಳೂರು–560006 | ನರಸಾಪುರ ಕಂ.ವೃ.<br>ಕೋಲಾರ ತಾಲ್ಲೂಕು | ಕೋಲಾರ |
| 3 | ಮಹಮ್ಮದ್‌ಬಾಬಾ ಬಿನ್ ಅಬ್ದುಲ್ ಗಫಾರ್ ಜಂಗಮಕೋಟೆ<br>ಗ್ರಾಮ ಮತ್ತು ಅಂಚೆ, ಶಿಡ್ಲಘಟ್ಟ ತಾಲ್ಲೂಕು –562101 | ರೋಣೂರು ಕಂ.ವೃ.<br>ಶ್ರೀನಿವಾಸಪುರ ತಾ: | ಶ್ರೀನಿವಾಸಪುರ |
| 4 | ಕೆ.ಎಸ್. ಪುಷ್ಪಲತಾ ಬಿನ್ ಶಂಕರಪ್ಪ ಇ.<br>ಸರ್ಕಾರಿ ಆಸ್ಪತ್ರೆ ಕ್ವಾಟ್ರರ್ಸ್, ಮುಳಬಾಗಿಲು –563131 | ಹೋಳೂರು ಕಂ.ವೃ.<br>ಕೋಲಾರ ತಾ: | ಕೋಲಾರ |
| 5 | ಶಾರದಾ ಬಿನ್ ರಾಮಣ್ಣ<br>ಭೂಜವಾಡ, ಚಕ್ಕರಕಟ್ಟ, ಯಾದಗಿರಿ ಜಿಲ್ಲೆ | ಹುಣಸನಹಳ್ಳಿ ಕಂ.ವೃ.<br>ಬಂಗಾರಪೇಟೆ ತಾ: | ಬಂಗಾರಪೇಟೆ |
| 6 | ಬಿದರಮ್ಮ ಬಿನ್ ದೊಡ್ಡತಿಮ್ಮಪ್ಪ,<br>ಕೋಂ ನಾಗರಾಜ, ಅಲಂಕಾರ್ ಥಿಯೇಟರ್,<br>ಹೊಸಕೋಟೆ–562114, ಬೆಂಗಳೂರು ಗ್ರಾಮಾಂತರ ಜಿಲ್ಲೆ | ದ್ಯಾಪಸಂದ್ರ ಕಂ.ವೃ.<br>ಮಾಲೂರು ತಾ: | ಮಾಲೂರು |
| 7 | ಮೀನಾ ಹೆಚ್.ಜಿ. ಬಿನ್ ಲೇಟ್ ಗುರುನಾಥ್<br>ಹೊಸಹಳ್ಳಿ ಗ್ರಾಮ, ಹೊಂಗೇನಹಳ್ಳಿ (ಅಂಚೆ)<br>ಮಾಲೂರು ತಾಲ್ಲೂಕು 563130 | ಕೋಡಿಚರವು ಕಂ.ವೃ.<br>ಶ್ರೀನಿವಾಸಪುರ ತಾ: | ಶ್ರೀನಿವಾಸಪುರ |
| 8 | ಗಾಯಿತ್ರಿ ಕೆ.ಪಿ. ಬಿನ್ ಪ್ರಭಾಕರ್ ಕೆ.ಎಂ.<br>ನಂ.1506, ಅಂಜನೇಯ ದೇವಸ್ಥಾನಬೀದಿ, 2ನೇ ಕ್ರಾಸ್,<br>ಕುರುಬರಪೇಟೆ, ಕೋಲಾರ–563101 | ಸಂತೇಹಳ್ಳಿ ಕಂ.ವೃ.<br>ಮಾಲೂರು ತಾ: | ಮಾಲೂರು |
| 9 | ಅಂಬರೀಶ್ ಜೆ. ಬಿನ್ ಜಯರಾಮರೆಡ್ಡಿ<br>ಜಂಗಮಾನಹಳ್ಳಿ ಗ್ರಾಮ,<br>ಬೇತಮಂಗಲ (ಅಂಚೆ), ಬಂಗಾರಪೇಟೆ ತಾಲ್ಲೂಕು 563113 | ರಾಯಲ್ಪಾಡು ಕಂ.ವೃ.<br>ಶ್ರೀನಿವಾಸಪುರ ತಾ: | ಶ್ರೀನಿವಾಸಪುರ |
| 10 | ನವ್ಯಶ್ರೀ ಬಿನ್ ನಾರಾಯಣಸ್ವಾಮಿ ಬಿ.ಸಿ.<br>ಬೈರ್ನಹಳ್ಳಿ ಗ್ರಾಮ ಮತ್ತು ಅಂಚೆ, ಮಾಲೂರು ತಾಲ್ಲೂಕು | ಶೆಟ್ಟಿಹಳ್ಳಿ ಕಂ.ವೃ.<br>ಕೋಲಾರ ತಾ: | ಕೋಲಾರ |
| 11 | ಹರೀಶ್ ಎಸ್. ಬಿನ್ ಶ್ರೀನಿವಾಸ ಎ.ಸಿ.<br>ಅಹನ್ಯ ಗ್ರಮ, ಡಿ.ಎನ್. ದೊಡ್ಡ (ಅಂಚೆ)<br>ಲಕ್ಕೂರು ಹೋಬಳಿ, ಮಾಲೂರು ತಾಲ್ಲೂಕು | ಅಂಬ್ಲಿಕಲ್ ಕಂ.ವೃ.<br>ಮುಳಬಾಗಿಲು ತಾ: | ಮುಳಬಾಗಿಲು |
| 12 | ಚೇತನಾ ವಿ.ಎನ್. ಬಿನ್ ನರಸಪ್ಪ<br>ಚಳಿಗರೆಪಾಳ್ಯ,ಕೆಂಪಸಾಗರ (ಅಂಚೆ)<br>ಕಸಬಾ ಹೋಬಳಿ, ಮಾಗಡಿ ತಾಲ್ಲೂಕು–562120 | ಮುದುವಾಡಿ<br>ಕೋಲಾರ ತಾ: | ಕೋಲಾರ |
| 13 | ಪೂರ್ಣಿಮಾ ಎಂ. ಬಿನ್ ಮಹೇಶ್ ಎಂ.<br>ವೆಂಕಟೇಶ್ವರ ಪ್ಲೋರ್‌ಮಿಲ್, ಅರವಿಂದನಗರ ಹತ್ತಿರ,<br>1ನೇ ಕ್ರಾಸ್, ಚಿಕ್ಕಮಗಳೂರು–577101 | ಕೆಂಬೋಡಿ ಕಂ.ವೃ.<br>ಕೋಲಾರ ತಾ: | ಕೋಲಾರ |
| 14 | ಅಜಯ್‌ಕುಮಾರ್ ಆರ್.<br>ಬಿನ್ ರೇವಪ್ಪ ಎಸ್.<br>ಕೆತ್ತಡಿ ಮಲಹಾಳ್ (ಗ್ರಾಮ) ಗೋಪೇನಹಳ್ಳಿ (ಅಂಚೆ),<br>ಚನ್ನಗಿರಿ ತಾಲ್ಲೂಕು, ಧಾವಣಗೆರೆ ಜಿಲ್ಲೆ | ಹುತ್ತೂರು ಕಂ.ವೃ.<br>ಕೋಲಾರ ತಾ: | ಕೋಲಾರ |
| 15 | ಅಮರೇಶ್ ವಿ. ಬಿನ್ ಲೇಟ್ ವೆಂಕಟೇಶಪ್ಪ ಕಣಿಂಬೆಲೆ<br>ಗ್ರಾಮ, ಐನೋರಹೊಸಹಳ್ಳಿ ಅಂಚೆ,<br>ಬಂಗಾರಪೇಟೆ ತಾಲ್ಲೂಕು–563114 | ದಿಂಬಾಳ ಕಂ.ವೃ.<br>ಶ್ರೀನಿವಾಸಪುರ ತಾ: | ಶ್ರೀನಿವಾಸಪುರ |

| ಕ್ರ ಸಂ. | ಅಭ್ಯರ್ಥಿ ಹೆಸರು ಹಾಗೂ ವಿಳಾಸ | ನಿಯುಕ್ತಿಗೊಳಿಸಿರುವ ಸ್ಥಳ | ಕರ್ತವ್ಯಕ್ಕೆ ಹಾಜರಾಗಬೇಕಾದ ತಹಶೀಲ್ದಾರ್ ಕಛೇರಿ |
|---|---|---|---|
| 1 | 2 | 3 | 4 |
| 16 | ಆನಂದಕುಮಾರ್ ಆರ್. ಬಿನ್ ರಾಮಪ್ಪ<br>ವಾರ್ಡ್ ನಂ. 6, ಕೋಗಿಲಹಳ್ಳಿ ಗ್ರಾಮ, ಕಮಲನೆಹರೂ<br>ಸ್ಯಾನಿಟೋರಿಯಂ ಅಂಚೆ, ಕೋಲಾರ–563101 | ನಾಗದೇನಹಳ್ಳಿ ಕಂ.ವೃ.<br>ಶ್ರೀನಿವಾಸಪುರ ತಾ: | ಶ್ರೀನಿವಾಸಪುರ |
| 17 | ದಿನೇಶ್ ಆರ್. ಬಿನ್ ರಮೇಶ್ ಎಂ.<br>ಬಾಲನಾಯಕನದೊಡ್ಡಿ, ಅಸಂಡಹಳ್ಳಿ ಅಂಚೆ,<br>ಮಾಲೂರು ತಾಲ್ಲೂಕು | ಕಮ್ಮಸಂದ್ರ ಕಂ.ವೃ.<br>ಬಂಗಾರಪೇಟೆ ತಾ: | ಬಂಗಾರಪೇಟೆ |
| | **ಎಸ್.ಸಿ.** | | |
| 18 | ಪವಿತ್ರ ಎಂ. ಬಿನ್ ಮುರುಗೇಶ್ ಕೆ.ಎಸ್.<br>ಕೊದಿಗೇನಹಳ್ಳಿ ಗ್ರಾಮ,<br>ಕುಪ್ಪಂಪಾಳ್ಯ ಅಂಚೆ, ಬಂಗಾರಪೇಟೆ ತಾಲ್ಲೂಕು | ಲಕ್ಷ್ಮೀಪುರ ಕಂ.ವೃ.<br>ಶ್ರೀನಿವಾಸಪುರ ತಾ: | ಶ್ರೀನಿವಾಸಪುರ |
| 19 | ಅಂಜಲಿ ಕೆ. ಬಿನ್ ಕೇಶವಮೂರ್ತಿ<br>ಬಳೇರಿ ಗ್ರಾಮ, ಹಳೆಪಾಳ್ಯ ಅಂಚೆ,<br>ಟೇಕಲ್ ಹೋಬಳಿ, ಮಾಲೂರು ತಾಲ್ಲೂಕು | ಕಾಮಸಮುದ್ರ ಕಂ.ವೃ.<br>ಬಂಗಾರಪೇಟೆ ತಾ: | ಬಂಗಾರಪೇಟೆ |
| 20 | ಶಿವರಾಜ್ ಆರ್. ಬಿನ್ ರಾಮಕೃಷ್ಣಪ್ಪ ಎಂ.<br>ಮೂರಾಂಡಹಳ್ಳಿ ಗ್ರಾಮ, ಅರಹಳ್ಳಿ ಅಂಚೆ,<br>ಕೋಲಾರ ತಾಲ್ಲೂಕು 563101 | ಮೋತಕಪಲ್ಲಿ ಕಂ.ವೃ.<br>ಮುಳಬಾಗಿಲು ತಾ: | ಮುಳಬಾಗಿಲು |
| | **ಪ್ರವರ್ಗ–1** | | |
| 21 | ಹೊಸೂರಪ್ಪ ಎಸ್.ಆರ್. ಬಿನ್ ರಾಮಪ್ಪ<br>ಪಳವನಹಳ್ಳಿ, ಚಟ್ನಹಳ್ಳಿ(ಅಂಚೆ),<br>ಹೊನ್ನಾಳಿ ತಾಲ್ಲೂಕು, ಧಾವಣಗೆರೆ | ಶೆಟ್ಟಿಕೊತ್ತನೂರು ಕಂ.ವೃ.<br>ಕೋಲಾರ ತಾ: | ಕೋಲಾರ |
| | **ಪ್ರವರ್ಗ–2ಎ** | | |
| 22 | ಸುರೇಶ್ ವಿ. ಬಿನ್ ಲೇಟ್ ವೇಲು ಕೆ.<br>ಹಾರೋಹಳ್ಳಿ ಕ್ರಾಸ್, ಬೆಂಗಳೂರು ಮುಖ್ಯರಸ್ತೆ,<br>ಮಾಲೂರು ತಾಲ್ಲೂಕು–563130 | ಕಶೆಟ್ಟಿಹಳ್ಳಿ ಕಂ.ವೃ.<br>ಶ್ರೀನಿವಾಸಪುರ ತಾ: | ಶ್ರೀನಿವಾಸಪುರ |
| 23 | ಅನಿತಾ ಎಸ್. ಬಿನ್ ಸುಂದರ್‌ರಾಜ್ ಕೆ.<br>ಸರ್ಕಾರಿ ಬಾಲಕಿಯರ ಕಾಲೇಜು ಹಿಂಭಾಗ,<br>1ನೇ ಕ್ರಾಸ್, ನೆಮ್ಮದಿಕೇಂದ್ರ ಹತ್ತಿರ,<br>ನೆಹರು ಬಡಾವಣೆ, ಮಾಲೂರು–563130 | ಪಾತನೆಲವಂಕಿ ಕಂ.ವೃ.<br>ಶ್ರೀನಿವಾಸಪುರ ತಾ: | ಶ್ರೀನಿವಾಸಪುರ |
| 24 | ರಾಹುಲ್ ಕೆ. ಬಿನ್ ಕೋದಂಡರಾಮೇಗೌಡ<br>ಅಬ್ಬೇನಹಳ್ಳಿ ಗ್ರಾಮ,<br>ಮಡಿವಾಳ ಅಂಚೆ, ಮಾಲೂರು ತಾಲ್ಲೂಕು–563130 | ಅರಾಭಿಕೊತ್ತನೂರು ಕಂ.ವೃ.<br>ಕೋಲಾರ ತಾ: | ಕೋಲಾರ |

ಎಲ್ಲಾ ಅಭ್ಯರ್ಥಿಗಳು ಸಾರ್ವಜನಿಕ ಸೇವೆಗೆ ಕಂಕಣಬದ್ಧವಾಗಿ ನಿಷ್ಠ, ಪ್ರಾಮಾಣಿಕತೆ ಹಾಗೂ ನಿಷ್ಪಕ್ಷಪಾತವಾಗಿ ಕರ್ತವ್ಯ ನಿರ್ವಹಿಸಲು ಸೂಚಿಸಿದೆ.

**ಷರತ್ತುಗಳು:**

1. ಮೇಲ್ಕಂಡ ಅಭ್ಯರ್ಥಿಗಳು ಈ ಆದೇಶ ತಲುಪಿದ ದಿನಾಂಕದಿಂದ 10 ದಿನಗಳೊಳಗಾಗಿ ಸಂಬಂಧಿಸಿದ ತಹಶೀಲ್ದಾರರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದದ್ದು. ತಪ್ಪಿದಲ್ಲಿ ಅವರು ಈ ಅವಕಾಶವನ್ನು ತಿರಸ್ಕರಿಸಿರುವರೆಂದು ಪರಿಗಣಿಸಿ ಯಾವುದೇ ಮುನ್ಸೂಚನೆ ನೀಡದೆ ಅವರ ನೇಮಕಾತಿಯನ್ನು ರದ್ದುಪಡಿಸಲು ಕ್ರಮವಹಿಸಲಾಗುವುದು.
2. ಅಭ್ಯರ್ಥಿಗಳಿಗೆ ನೇಮಕಾತಿ ಮಾಡಿರುವ ಸ್ಥಳ / ಬದಲಾವಣೆ ಬಗ್ಗೆ ಯಾವುದೇ ಒತ್ತಡಗಳು / ಶಿಫಾರಸ್ಸುಗಳನ್ನು ಮಾಡಿಸತಕ್ಕದ್ದಲ್ಲ ಈ ರೀತಿ ಮಾಡಿದಲ್ಲಿ ಅವರ ವಿರುದ್ಧ ಕಾನೂನಿನಂತೆ ಕ್ರಮವಹಿಸಲಾಗುವುದು.
3. ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಈ ಕೆಳಕಂಡ ಮೂಲ ಪ್ರಮಾಣಪತ್ರಗಳನ್ನು ಪರಿಶೀಲನೆಗಾಗಿ ಹಾಜರ್ ಪಡಿಸಬೇಕು.

   (1) ಪಿಯುಸಿ ಅಂಕಪಟ್ಟಿ, (2) ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ಅಥವಾ ಜನ್ಮದಿನಾಂಕಕ್ಕೆ ಪೂರಕವಾದ ದೃಢೀಕರಣ ಪತ್ರ (3) ನಡತೆ ಪ್ರಮಾಣ ಪತ್ರ (4) ಜಿಲ್ಲಾ ಸರ್ಜನ್‌ರಿಂದ ವೈದ್ಯಕೀಯ ಪ್ರಮಾಣಪತ್ರ (5) ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣಪತ್ರಗಳ ಸಿಂಧುತ್ವ ಪ್ರಮಾಣಪತ್ರಗಳು (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ) ನೇಮಕಾತಿ ಸಂಬಂಧ ಇನ್ನಿತರೆ ಮೂಲ ಪ್ರಮಾಣಪತ್ರಗಳು

4. ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ ಅವಧಿಯಲ್ಲಿದ್ದು (ಪ್ರೋಬೇಷನರಿ) ಅವರು ಈ ಅವಧಿಯಲ್ಲಿ ಸದರಿ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಕಡ್ಡಾಯವಾಗಿ ತೇರ್ಗಡೆಯಾಗತಕ್ಕದ್ದು. ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗದಿದ್ದಲ್ಲಿ ಅಥವಾ ನೌಕರರ ಸೇವೆಯು ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ತೆಗೆದುಹಾಕಲು ನಿಯಮಾನುಸಾರ ಕ್ರಮಕೈಗೊಳ್ಳಲಾಗುವುದು.
5. ಅಭ್ಯರ್ಥಿಗಳು ತಹಶೀಲ್ದಾರರಲ್ಲಿ ಕೆಲಸಕ್ಕೆ ಹಾಜರಾದ ನಂತರ ಅವರನ್ನು ನಿಯೋಜಿಸಲಾಗುವ ಗ್ರಾಮಲೆಕ್ಕಿಗರ ವೃತ್ತಿ ಬುನಾದಿ ತರಬೇತಿಗೆ ಕಡ್ಡಾಯವಾಗಿ ಹಾಜರಾಗತಕ್ಕದ್ದು.
6. ಸರ್ಕಾರದ ಆದೇಶ ಸಂ. ಸಿಆಸುಇ 59 ಸೇವನೆ 2012 ದಿನಾಂಕ 06–08–2012 ರಂತೆ ಅಭ್ಯರ್ಥಿಯು 2 ವರ್ಷಗಳ ಪರಿವೀಕ್ಷಣಾ ಅವಧಿಯೊಳಗಾಗಿ ನಿಗದಿಪಡಿಸಬಹುದಾದ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಕಡ್ಡಾಯವಾಗಿ ಉತ್ತೀರ್ಣರಾಗತಕ್ಕದ್ದು.
7. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು, ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸುಳ್ಳು ಮಾಹಿತಿ / ದಾಖಲೆ ನೀಡಿ ಉದ್ಯೋಗ ಪಡೆದಿರುವುದು ಕಂಡುಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೇ ಸೇವೆಯಿಂದ ತೆಗೆದುಹಾಕಲು ನಿಯಮಾನುಸಾರ ಕ್ರಮಕೈಗೊಳ್ಳಲಾಗುವುದು.
8. ಅಭ್ಯರ್ಥಿಗಳು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತದ ಸಂವಿಧಾನಕ್ಕೆ ನಿಷ್ಠೆಯಿಂದಿರುವ ಸಂಬಂಧ ಗೊತ್ತುಪಡಿಸಿದ ನಮೂನೆಯಲ್ಲಿ ಪ್ರಮಾಣಪತ್ರ ನೀಡತಕ್ಕದ್ದು.
9. ಅಭ್ಯರ್ಥಿಗಳು ಸರ್ಕಾರದ ಆದೇಶ ನಂ. ಎಫ್‌ಡಿ (ಎಸ್‌ಪಿಎಲ್) 04 ಪಿಇಟಿ 2005 ದಿನಾಂಕ 31/3/2006 ರಲ್ಲಿ ಜಾರಿಗೆ ನೀಡಿದ ಹೊಸ ನಿವೃತ್ತಿ ವೇತನ ನೀತಿಗೆ ಒಳಪಟ್ಟಿರುತ್ತಾರೆ.
10. ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ಹೆಸರು ನೊಂದಾಯಿಸಿದ್ದಲ್ಲಿ ಗುರುತಿನ ಚೀಟಿಯನ್ನು ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು. ತಹಶೀಲ್ದಾರರು ಅದನ್ನು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರೆಂಡರ್ ಮಾಡುವುದು.
11. ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958: ಕರ್ನಾಟಕ ನಾಗರೀಕ ಸೇವಾ (ಸಿಸಿದ) ನಿಯಮಾವಳಿ 1957 : ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966 ಹಾಗೂ ಇನ್ನಿತರೆ ಸೇವಾ ನಿಯಮಾವಳಿಗಳು ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗಿರುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರತಕ್ಕದ್ದು.
12. ಅಭ್ಯರ್ಥಿ ತನ್ನ ಹಾಗೂ ತನ್ನ ಕುಟುಂಬ ಸ್ಥಿರ ಹಾಗೂ ಚರಾಸ್ತಿಗಳ ಘೋಷಣಾ ಪತ್ರಗಳನ್ನು ಕರ್ತವ್ಯಕ್ಕೆ ವರದಿ ಮಾಡಿಕೊಂಡ ಒಂದು ತಿಂಗಳ ಒಳಗಾಗಿ ಸಲ್ಲಿಸತಕ್ಕದ್ದು.
13. ಕರ್ತವ್ಯಕ್ಕೆ ಹಾಜರಾಗುವಾಗ ಅಭ್ಯರ್ಥಿಗಳ ಈ ಕೆಳಕಾಣಿಸಿದ ಘೋಷಣೆಯಿಂದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಗ್ರಾಮಲೆಕ್ಕಿಗರಾಗಿ ನನ್ನ ಕೆಲಸವು ಹಂಗಾಮಿ ಎಂದು ನನಗೆ ತಿಳಿದಿದೆ ಮತ್ತು ನನಗೆ ಯಾವುದೇ ಕಾರಣ ಮತ್ತು ಮುಂಗಡ ನೀಡದೆ ನನ್ನನ್ನು ಕೆಲಸದಿಂದ ತೆಗೆದು ಹಾಕಬಹುದೆಂಬ ವಿಚಾರ ನನಗೆ ತಿಳಿದಿರುತ್ತದೆ. ಹಾಗೂ ನಾನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977 ರ ಎಲ್ಲಾ ನಿಯಮಾವಳಿಗಳಿಗೆ ಬದ್ಧನಾಗಿರುತ್ತೇನೆ.
14. ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾದ ರೂ. 1000/– (ರೂಪಾಯಿ ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸಂಬಂಧಪಟ್ಟ ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರವನ್ನು ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.
15. ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗದಿಪಡಿಸಿದ ಹಾಗೂ ನಿಗದಿಪಡಿಸಲಾಗುವ ವಿವಿಧ ಪರೀಕ್ಷೆ, ತರಬೇತಿಗಳನ್ನು ಯಶಸ್ವಿಯಾಗಿ ಪೂರ್ಣಗೊಳಿಸತಕ್ಕದ್ದು.
16. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ಅವರನ್ನು ನೇಮಕ ಮಾಡಲಾದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಹಾಲಿ ಕೆಲಸ ನಿರ್ವಹಿಸುತ್ತಿರುವ ಕಛೇರಿ / ಇಲಾಖೆಗಳಲ್ಲಿ, ಸೇವೆಯಿಂದ ಬಿಡುಗಡೆ ಹೊಂದಿ, ಸದರಿ ಆದೇಶ ಪ್ರತಿಯನ್ನು ತಹಶೀಲ್ದಾರರಲ್ಲಿ ಹಾಜರುಪಡಿಸಬೇಕು. ತಹಶೀಲ್ದಾರರು ಈ ವಿವರಗಳನ್ನು ಸಂಬಂಧಿಸಿದ ನೌಕರರ ಸೇವಾ ವಹಿಯಲ್ಲಿ ನಮೂದಿಸಿ ದೃಢೀಕರಿಸತಕ್ಕದ್ದು.
17. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.
18. ಆಯ್ಕೆಯಾಗುವ ಅಭ್ಯರ್ಥಿಗಳು ಅವರನ್ನು ನೇಮಿಸಿರುವ ಕೇಂದ್ರಸ್ಥಾನದಲ್ಲಿ ಕಡ್ಡಾಯವಾಗಿ ವಾಸ ಮಾಡಬೇಕು ಹಾಗೂ ಅಂತಹ ವಾಸಸ್ಥಳದ ವಿಳಾಸವನ್ನು ತಹಶೀಲ್ದಾರ್‌ರಿಗೆ ಲಿಖಿತ ರೂಪದಲ್ಲಿ ನೀಡತಕ್ಕದ್ದು.
19. ಅಭ್ಯರ್ಥಿಗಳ ಜೇಷ್ಟತಾ ಪಟ್ಟಿಯು ಅವರ ನೇಮಕಾತಿಯ ಅಂತಿಮ ಆಯ್ಕೆ ಪಟ್ಟಿಯನ್ನು ಆಧರಿಸಿ ಇರುತ್ತದೆ.

ಅಧ್ಯಕ್ಷರು, ಗ್ರಾಮಲೆಕ್ಕಿಗರ ನೇರ ನೇಮಕಾತಿ
ಆಯ್ಕೆಪ್ರಾಧಿಕಾರ ಮತ್ತು ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

P.R. 24

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

**ನಂ. ಸಿಬ್ಬಂದಿ(2) ಸಿಆರ್ 15/2012–13, ದಿನಾಂಕ 31/01/2013**

**ವಿಷಯ:** ಕೋಲಾರ ಜಿಲ್ಲಾ ಕಂದಾಯ ಘಟಕದಲ್ಲಿ ಹೊಸದಾಗಿ ಮಂಜೂರಾದ ನಾಡಕಛೇರಿಗಳ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ ಆರ್‌ಡಿ 299 ಬಿಎಸ್‌ಸಿ 2006 ದಿನಾಂಕ 3/2/2009.
2. ಸರ್ಕಾರದ ಆದೇಶ ನಂ. ಆರ್‌ಡಿ 33 ಡಿಎಸ್‌ಪಿ 2012 ದಿನಾಂಕ 5/6/2012
3. ಈ ಕಛೇರಿಯ ಸಮಸಂಖ್ಯೆಯ ಅಧಿಸೂಚನೆ ದಿನಾಂಕ 29/6/2012.
4. ಈ ಕಛೇರಿಯ ಸಮಸಂಖ್ಯೆಯ ಅಧಿಸೂಚನೆ ದಿನಾಂಕ 27/9/2012 ರನ್ವಯ ಪ್ರಕಟಿಸಲಾದ ಗ್ರಾಮಲೆಕ್ಕಿಗರ (ಕಂ.ಜ್ಞಾನ) ಅಂತಿಮ ಆಯ್ಕೆ ಪಟ್ಟಿ.

## ಅಧಿಕೃತ ಜ್ಞಾಪನ

ಕೋಲಾರ ಜಿಲ್ಲೆಯಲ್ಲಿ ಹೊಸದಾಗಿ ಸ್ಥಾಪಿಸಲಾಗಿರುವ ನಾಡಕಚೇರಿಗಳಲ್ಲಿ ಸೃಜಿಸಲಾಗಿರುವ 12 ಗ್ರಾಮಲೆಕ್ಕಾಧಿಕಾರಿಗಳ (ಕಂ.ಜ್ಞಾನ) ಹುದ್ದೆಗಳನ್ನು ನೇರನೇಮಕಾತಿ ಮೂಲಕ ತುಂಬಲು ಉಲ್ಲೇಖ (1) ರ ಅಧಿಸೂಚನೆ ಹಾಗೂ ಉಲ್ಲೇಖ (2) ರ ಆದೇಶದಲ್ಲಿ ನೀಡಿರುವ ಸೂಚನೆಗಳ ಮೇರೆಗೆ ಕ್ರಮವಹಿಸಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಉಲ್ಲೇಖ (4) ರಂತೆ ಅಂತಿಮ ಆಯ್ಕೆಪಟ್ಟಿಯನ್ನು ಹೊರಡಿಸಲಾಗಿರುತ್ತದೆ.

ಸಾಮಾನ್ಯ ವರ್ಗದಡಿ ಆಯ್ಕೆಯಾದ ಅಭ್ಯರ್ಥಿಗಳ ಗುಣ ಮತ್ತು ನಡತೆ, ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರದ ಬಗ್ಗೆ ಹಾಗೂ ವಿವಿಧ ಮೀಸಲಾತಿ ಪ್ರವರ್ಗಗಳಡಿ ಆಯ್ಕೆಯಾದ ಅಭ್ಯರ್ಥಿಗಳ ಸಿಂಧುತ್ವ ಪ್ರಮಾಣಪತ್ರಗಳನ್ನು ಸಲ್ಲಿಸುವಂತೆ ಸಂಬಂಧಪಟ್ಟ ಜಿಲ್ಲೆಗಳ ಅಧಿಕಾರಿಗಳಿಗೆ ಕೋರಲಾಗಿ, ಕೆಲವು ಅಭ್ಯರ್ಥಿಗಳ ಗುಣ ಮತ್ತು ನಡತೆ ಪತ್ರಗಳ ಹಾಗೂ ಸಿಂಧುತ್ವ ಪತ್ರಗಳು ಸ್ವೀಕೃತವಾಗಿದ್ದು, ಇನ್ನು ಕೆಲವು ಅಭ್ಯರ್ಥಿಗಳ ಪರಿಶೀಲನಾ ಪತ್ರಗಳ ಸ್ವೀಕೃತಗೊಳ್ಳಬೇಕಾಗಿದ್ದು, ಈ ಕೆಳಕಂಡಂತೆ ಷರತ್ತುಗಳಿಗೊಳಪಡಿಸಿ, ಗ್ರಾಮಲೆಕ್ಕಿಗರ ಹುದ್ದೆಯ ವೇತನ ಶ್ರೇಣಿ ರೂ. 11600–200–12000–250–13000–300–14200–350–15600–400–17200–450–19000–500–21000 ರಲ್ಲಿ ಮೂಲವೇತನ ರೂ. 11600 ಹಾಗೂ ಇತರೆ ಭತ್ಯೆಗಳನ್ವಯ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗೆ ನೇಮಕ ಮಾಡಿ ಅವರ ಹೆಸರುಗಳ ಮುಂದೆ ನಮೂದಿಸಿರುವ ಸ್ಥಳಗಳಿಗೆ ನಿಯುಕ್ತಿಗೊಳಿಸಿ ಆದೇಶಿಸಿದೆ.

| ಕ್ರ. ಸಂ. | ಅಭ್ಯರ್ಥಿ ಹೆಸರು ಹಾಗೂ ವಿಳಾಸ | ನಿಯುಕ್ತಿಗೊಳಿಸಿರುವ ಸ್ಥಳ | ಕರ್ತವ್ಯಕ್ಕೆ ಹಾಜರಾಗಬೇಕಾದ ತಹಶೀಲ್ದಾರ್ ಕಛೇರಿ |
|---|---|---|---|
| 1 | 2 | 3 | 4 |
| 1 | ಕೆ. ಚೈತ್ರ ಬಿನ್ ಜಿ.ಎಂ.ಕೃಷ್ಣಪ್ಪ, ಗೊನ್ನೂರು ಗ್ರಾಮ, ನಾರಾಯಣಪುರ ಅಂಚೆ, ದೇವನಹಳ್ಳಿ ತಾಲ್ಲೂಕು | ನಾಡಕಛೇರಿ, ಆವಣಿ | ಮುಳಬಾಗಿಲು |
| 2 | ಬಿ.ಎನ್. ತಿಮ್ಮಕ್ಕ ಬಿನ್ ನರಸಿಂಹಪ್ಪ, ಬೈಚಾಪುರ ಗ್ರಾಮ (ಅಂಚೆ) ಗೌರಿಬಿದನೂರು ತಾಲ್ಲೂಕು | ನಾಡಕಛೇರಿ, ದುಗ್ಗಸಂದ್ರ | ಮುಳಬಾಗಿಲು |
| 3 | ಜಿ.ವಿ. ನಾಗೇಶ್ ಬಿನ್ ವೆಂಕಟಪ್ಪ ಗಡಿಗೇನಹಳ್ಳಿ ಗ್ರಾಮ, ಕಂಬಿಗಾನಹಳ್ಳಿ (ಅಂಚೆ) ಹೊಸಕೋಟೆ ತಾಲ್ಲೂಕು | ನಾಡಕಛೇರಿ, ನೆಲವಂಕಿ | ಶ್ರೀನಿವಾಸಪುರ |
| 4 | ಶಿವಾನಂದ ಮಠಪತಿ ಬಿನ್ ಬಸಯ್ಯ ಸುತಗಟ್ಟಿ ಗ್ರಾಮ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ | ನಾಡಕಛೇರಿ, ರೋಣೂರು | ಶ್ರೀನಿವಾಸಪುರ |
| 5 | ಎಂ. ಮಧುಚಂದ್ರ ಬಿನ್ ಮುನಿಬೀರಪ್ಪ ಸೋರೇಗೌಡನಕೋಟೆ ಗ್ರಾಮ (ಅಂಚೆ), ಬಂಗಾರಪೇಟೆ ತಾಲ್ಲೂಕು | ನಾಡಕಛೇರಿ, ವೇಮಗಲ್ | ಕೋಲಾರ |
| 6 | ಎಸ್.ಆರ್. ಅಶ್ವಿನಿ ಬಿನ್ ಎಸ್.ಸಿ. ರಾಜೇಗೌಡ ಅಗಲೇರಿ ಬೀದಿ, ಸಾಲಿಗ್ರಾಮ, ಕೆ.ಆರ್. ನಗರತಾಲ್ಲೂಕು, ಮೈಸೂರು ಜಿಲ್ಲೆ | ನಾಡಕಛೇರಿ, ಸುಗಟೂರು | ಕೋಲಾರ |
| 7 | ಎಸ್. ಸರಸ್ವತಿ ಬಿನ್ ಹೆಚ್. ಶೇಖಪ್ಪ ಕೇರಾಫ್ ಶ್ರೀನಿವಾಸರೆಡ್ಡಿ, ಪ್ಲಾಟ್ ನಂ. 13, ಶ್ರೀ ನಿಲಯಂ, ರಾಘವ ಕಲ್ಯಾಣ ಕಾಲೋನಿ, ವಿದ್ಯಾನಗರ, ಬಳ್ಳಾರಿ | ನಾಡಕಛೇರಿ, ವಕ್ಕಲೇರಿ | ಕೋಲಾರ |
| 8 | ಯಮನಪ್ಪ ವಡ್ಡರ ಬಿನ್ ಬಸಪ್ಪ ಕೊಣ್ಣೂರು ಗ್ರಾಮ, ಹುನುಗುಂದ ತಾಲ್ಲೂಕು, ಬಾಗಲಕೋಟೆ ಜಿಲ್ಲೆ | ನಾಡಕಛೇರಿ, ಕಾಮಸಮುದ್ರ | ಬಂಗಾರಪೇಟೆ |
| 9 | ರೇಣುಕಾ ಬಿರಾದಾರ ಬಿನ್ ಜಟ್ಟೆಪ್ಪ ಸುರಗೀಹಳ್ಳಿ ಗ್ರಾಮ, ಸಿಂದಗಿ ತಾಲ್ಲೂಕು, ಬಿಜಾಪುರ ಜಿಲ್ಲೆ | ನಾಡಕಛೇರಿ, ಬೂದಿಕೋಟೆ | ಬಂಗಾರಪೇಟೆ |
| 10 | ಕೆ.ರವಿಕುಮಾರ್ ಬಿನ್ ಕೋದಂಡರಾಮಯ್ಯ ಪರಪಸ್ವಾಮಿ ದೇವಾಲಯ ಎದರು, ಹೊಸಪಾಳ್ಯ ಗ್ರಾಮ, ಹಳೇಪಾಳ್ಯ ಅಂಚೆ, ತಿಪಟೂರು ತಾಲ್ಲೂಕು | ನಾಡಕಛೇರಿ, ನರಸಾಪುರ | ಕೋಲಾರ |
| 11 | ಪಿ.ಆರ್. ಅಂಬಿಕಾ ಬಿನ್ ರಾಮಕೃಷ್ಣರೆಡ್ಡಿ ಪಾಳ್ಯಕೆರೆ ಗ್ರಾಮ (ಅಂಚೆ) ಬಾಗೇಪಲ್ಲಿ ತಾ: | ನಾಡಕಛೇರಿ, ಬೇತಮಂಗಲ | ಬಂಗಾರಪೇಟೆ |
| 12 | ನವರತ್ನ ಮರಿಗೌಡರ್ ಬಿನ್ ರಘುನಾಥಗೌಡ ರೊಟ್ಟಿಗವಾಡ ಗ್ರಾಮ (ಅಂಚೆ), ಕುಂದಗೊಳ ತಾಲ್ಲೂಕು, ಧಾರವಾಡ ಜಿಲ್ಲೆ | ನಾಡಕಛೇರಿ, ಲಕ್ಕೂರು | ಮಾಲೂರು |

ಎಲ್ಲಾ ಅಭ್ಯರ್ಥಿಗಳು ಸಾರ್ವಜನಿಕ ಸೇವೆಗೆ ಕಂಕಣಬದ್ದವಾಗಿ ನಿಷ್ಟ, ಪ್ರಾಮಾಣಿಕತೆ ಹಾಗೂ ನಿಷ್ಪಕ್ಷಪಾತವಾಗಿ ಕರ್ತವ್ಯ ನಿರ್ವಹಿಸಲು ಸೂಚಿಸಿದೆ.

**ಷರತ್ತುಗಳು:**

1. ಮೇಲ್ಕಂಡ ಅಭ್ಯರ್ಥಿಗಳು ಈ ಆದೇಶ ತಲುಪಿದ ದಿನಾಂಕದಿಂದ 10 ದಿನಗಳೊಳಗಾಗಿ ಸಂಬಂಧಿಸಿದ ತಹಶೀಲ್ದಾರರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದದ್ದು. ತಪ್ಪಿದಲ್ಲಿ ಅವರು ಈ ಅವಕಾಶವನ್ನು ತಿರಸ್ಕರಿಸಿರುವರೆಂದು ಪರಿಗಣಿಸಿ ಯಾವುದೇ ಮುನ್ಸೂಚನೆ ನೀಡದೆ ಅವರ ನೇಮಕಾತಿಯನ್ನು ರದ್ದುಪಡಿಸಲು ಕ್ರಮವಹಿಸಲಾಗುವುದು.
2. ಅಭ್ಯರ್ಥಿಗಳಿಗೆ ನೇಮಕಾತಿ ಮಾಡಿರುವ ಸ್ಥಳ / ಬದಲಾವಣೆ ಬಗ್ಗೆ ಯಾವುದೇ ಒತ್ತಡಗಳು / ಶಿಫಾರಸ್ಸುಗಳನ್ನು ಮಾಡಿಸತಕ್ಕದ್ದಲ್ಲ ಈ ರೀತಿ ಮಾಡಿದಲ್ಲಿ ಅವರ ವಿರುದ್ದ ಕಾನೂನಿನಂತೆ ಕ್ರಮವಹಿಸಲಾಗುವುದು.
3. ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಈ ಕೆಳಕಂಡ ಮೂಲ ಪ್ರಮಾಣಪತ್ರಗಳನ್ನು ಪರಿಶೀಲನೆಗಾಗಿ ಹಾಜರ್ ಪಡಿಸಬೇಕು.

   (2) ಪಿಯುಸಿ ಅಂಕಪಟ್ಟಿ, (2) ಎಸ್ಎಸ್ಎಲ್ಸಿ ಅಂಕಪಟ್ಟಿ ಅಥವಾ ಜನ್ಮದಿನಾಂಕಕ್ಕೆ ಪೂರಕವಾದ ದೃಢೀಕರಣ ಪತ್ರ (3) ನಡತೆ ಪ್ರಮಾಣ ಪತ್ರ (4) ಜಿಲ್ಲಾ ಸರ್ಜನ್‌ರಿಂದ ವೈದ್ಯಕೀಯ ಪ್ರಮಾಣಪತ್ರ (5) ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣಪತ್ರಗಳ ಸಿಂಧುತ್ವ ಪ್ರಮಾಣಪತ್ರಗಳು (ಮೀಸಲಾತಿಯಡಿ ಅಯ್ಕೆಯಾದ ಅಭ್ಯರ್ಥಿಗಳು ಮಾತ್ರ) ನೇಮಕಾತಿ ಸಂಬಂಧ ಇನ್ನಿತರೆ ಮೂಲ ಪ್ರಮಾಣಪತ್ರಗಳು

4. ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ ಅವಧಿಯಲ್ಲಿದ್ದು (ಪ್ರೋಬೇಷನರಿ) ಅವರು ಈ ಅವಧಿಯಲ್ಲಿ ಸದರಿ ಹುದ್ದೆಗೆ ನಿಗದಿಪಡಿಸಿದ ಇಲಾಖಾ ಪರೀಕ್ಷೆಗಳಲ್ಲಿ ಕಡ್ಡಾಯವಾಗಿ ತೇರ್ಗಡೆಯಾಗತಕ್ಕದ್ದು. ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ತೇರ್ಗಡೆಯಾಗದಿದ್ದಲ್ಲಿ ಅಥವಾ ನೌಕರರ ಸೇವೆಯು ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ತೆಗೆದುಹಾಕಲು ನಿಯಮಾನುಸಾರ ಕ್ರಮಕೈಗೊಳ್ಳಲಾಗುವುದು.
5. ಅಭ್ಯರ್ಥಿಗಳು ತಹಶೀಲ್ದಾರರಲ್ಲಿ ಕೆಲಸಕ್ಕೆ ಹಾಜರಾದ ನಂತರ ಅವರನ್ನು ನಿಯೋಜಿಸಲಾಗುವ ಗ್ರಾಮಲೆಕ್ಕಿಗರ ವೃತ್ತಿ ಬುನಾದಿ ತರಬೇತಿಗೆ ಕಡ್ಡಾಯವಾಗಿ ಹಾಜರಾಗತಕ್ಕದ್ದು.
6. ಸರ್ಕಾರದ ಆದೇಶ ಸಂ. ಸಿಆಸುಇ 59 ಸೇವನೆ 2012 ದಿನಾಂಕ 06–08–2012 ರಂತೆ ಅಭ್ಯರ್ಥಿಯು 2 ವರ್ಷಗಳ ಪರಿವೀಕ್ಷಣಾ ಅವಧಿಯೊಳಗಾಗಿ ನಿಗದಿಪಡಿಸಬಹುದಾದ ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯನ್ನು ಕಡ್ಡಾಯವಾಗಿ ಉತ್ತೀರ್ಣರಾಗತಕ್ಕದ್ದು.
7. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು, ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸುಳ್ಳು ಮಾಹಿತಿ / ದಾಖಲೆ ನೀಡಿ ಉದ್ಯೋಗ ಪಡೆದಿರುವುದು ಕಂಡುಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೇ ಸೇವೆಯಿಂದ ತೆಗೆದುಹಾಕಲು ನಿಯಮಾನುಸಾರ ಕ್ರಮಕೈಗೊಳ್ಳಲಾಗುವುದು.
8. ಅಭ್ಯರ್ಥಿಗಳು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತದ ಸಂವಿಧಾನಕ್ಕೆ ನಿಷ್ಠೆಯಿಂದಿರುವ ಸಂಬಂಧ ಗೊತ್ತುಪಡಿಸಿದ ನಮೂನೆಯಲ್ಲಿ ಪ್ರಮಾಣಪತ್ರ ನೀಡತಕ್ಕದ್ದು.
9. ಅಭ್ಯರ್ಥಿಗಳು ಸರ್ಕಾರದ ಆದೇಶ ನಂ. ಎಫ್‌ಡಿ (ಎಸ್‌ಪಿಎಲ್) 04 ಪಿಇಟಿ 2005 ದಿನಾಂಕ 31/3/2006 ರಲ್ಲಿ ಜಾರಿಗೆ ನೀಡಿದ ಹೊಸ ನಿವೃತ್ತಿ ವೇತನ ನೀತಿಗೆ ಒಳಪಟ್ಟಿರುತ್ತಾರೆ.
10. ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ಹೆಸರು ನೊಂದಾಯಿಸಿದ್ದಲ್ಲಿ ಗುರುತಿನ ಚೀಟಿಯನ್ನು ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು. ತಹಶೀಲ್ದಾರರು ಅದನ್ನು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರೆಂಡರ್ ಮಾಡುವುದು.
11. ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958: ಕರ್ನಾಟಕ ನಾಗರೀಕ ಸೇವಾ (ಸಿಸಿದ) ನಿಯಮಾವಳಿ 1957 : ಕರ್ನಾಟಕ ನಾಗರೀಕ ಸಏವಾ (ನಡತೆ) ನಿಯಮಾವಳಿ 1966 ಹಾಗೂ ಇನ್ನಿತರೆ ಸೇವಾ ನಿಯಮಾವಳಿಗಳು ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗಿರುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರತಕ್ಕದ್ದು.
12. ಅಭ್ಯರ್ಥಿ ತನ್ನ ಹಾಗೂ ತನ್ನ ಕುಟುಂಬ ಸ್ಥಿರ ಹಾಗೂ ಚರಾಸ್ತಿಗಳ ಘೋಷಣಾ ಪತ್ರಗಳನ್ನು ಕರ್ತವ್ಯಕ್ಕೆ ವರದಿ ಮಾಡಿಕೊಂಡ ಒಂದು ತಿಂಗಳ ಒಳಗಾಗಿ ಸಲ್ಲಿಸತಕ್ಕದ್ದು.
13. ಕರ್ತವ್ಯಕ್ಕೆ ಹಾಜರಾಗುವಾಗ ಅಭ್ಯರ್ಥಿಗಳ ಈ ಕೆಳಕಾಣಿಸಿದ ಘೋಷಣೆಯಿಂದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಗ್ರಾಮಲೆಕ್ಕಿಗರಾಗಿ ನನ್ನ ಕೆಲಸವು ಹಂಗಾಮಿ ಎಂದು ನನಗೆ ತಿಳಿದಿದೆ ಮತ್ತು ನನಗೆ ಯಾವುದೇ ಕಾರಣ ಮತ್ತು ಮುಂಗಡ ನೀಡದೆ ನನ್ನನ್ನು ಕೆಲಸದಿಂದ ತೆಗೆದು ಹಾಕಬಹುದೆಂಬ ವಿಚಾರ ನನಗೆ ತಿಳಿದಿರುತ್ತದೆ. ಹಾಗೂ ನಾನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ಎಲ್ಲಾ ನಿಯಮಾವಳಿಗಳಿಗೆ ಬದ್ಧನಾಗಿರುತ್ತೇನೆ.
14. ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾದ ರೂ. 1000/– (ರೂಪಾಯಿ ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸಂಬಂಧಪಟ್ಟ ತಹಶೀಲ್ದಾರರಲ್ಲಿ ಹಾಜರುಪಡಿಸತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರವನ್ನು ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.
15. ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗದಿಪಡಿಸಿದ ಹಾಗೂ ನಿಗದಿಪಡಿಸಲಾಗುವ ವಿವಿಧ ಪರೀಕ್ಷೆ, ತರಬೇತಿಗಳನ್ನು ಯಶಸ್ವಿಯಾಗಿ ಪೂರ್ಣಗೊಳಿಸತಕ್ಕದ್ದು.
16. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ಅವರನ್ನು ನೇಮಕ ಮಾಡಲಾದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಹಾಲಿ ಕೆಲಸ ನಿರ್ವಹಿಸುತ್ತಿರುವ ಕಛೇರಿ / ಇಲಾಖೆಗಳಲ್ಲಿ, ಸೇವೆಯಿಂದ ಬಿಡುಗಡೆ ಹೊಂದಿ, ಸದರಿ ಆದೇಶ ಪ್ರತಿಯನ್ನು ತಹಶೀಲ್ದರರಲ್ಲಿ ಹಾಜರುಪಡಿಸಬೇಕು. ತಹಶೀಲ್ದಾರರು ಈ ವಿವರಗಳನ್ನು ಸಂಬಂಧಿಸಿದ ನೌಕರರ ಸೇವಾ ವಹಿಯಲ್ಲಿ ನಮೂದಿಸಿ ದೃಢೀಕರಿಸತಕ್ಕದ್ದು.
17. ಕ್ರಮಾಂಕ 4 ರ ಅಭ್ಯರ್ಥಿಗೆ ಸಂಬಂಧಿಸಿದಂತೆ, ಗ್ರಾಮೀಣಾ ಅಭ್ಯರ್ಥಿ ಪ್ರಮಾಣಪತ್ರದ ಬಗ್ಗೆ, ಕ್ರಮಾಂಕ 10 ರವರಿಗೆ ಗುಣ ಮತ್ತು ನಡತೆ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ವರದಿ ಬರಬೇಕಾಗಿದ್ದು, ಸದರಿ ವರದಿ ನಿರೀಕ್ಷಿಸಿ ನೇಮಕಾತಿ ಮಾಡಲಾಗಿರುತ್ತೆ. ಸಕ್ಷಮ ಪ್ರಾಧಿಕಾರದಿಂದ ಪ್ರತಿಕೂಲ ಷರಾ ಇರುವುದು ಕಂಡು ಬಂದಲ್ಲಿ ಅಂತಹ ಅಭ್ಯರ್ಥಿಗಳಿಗೆ ಯಾವುದೇ ಮುನ್ಸೂಚನೆ ನೀಡದೆ ನೇಮಕಾತಿಯನ್ನು ರದ್ದುಪಡಿಸಲಾಗುವುದು ಹಾಗೂ ಅವರ ವಿರುದ್ದ ಕಾನೂನುಕ್ರಮ ಜರುಗಿಸಲು ಸಂಬಂಧಪಟ್ಟ ಸಕ್ಷಮ ಪ್ರಾಧಿಕಾರಗಳಿಗೆ ವರದಿ ಕಳುಹಿಸಲಾಗುವುದು.
18. ಈ ಗ್ರಾಮಲೆಕ್ಕಿಗರನ್ನು ಹೊಸದಾಗಿ ಸ್ಥಾಪಿಸಲಾಗುತ್ತಿರುವ ನಾಡಕಛೇರಿಗಳಿಗೆ ನೇಮಕ ಮಾಡುತ್ತಿರುವುದರಿಂದ ನಾಡಕಛೇರಿಗೆ ಹೊರತುಪಡಿಸಿ, ಗ್ರಾಮಲೆಕ್ಕಿಗ ವೃತ್ತಕ್ಕೆ ಅಥವಾ ಭೂಮಿ ಕೇಂದ್ರಕ್ಕೆ ವರ್ಗಾವಣೆ / ನಿಯೋಜನೆ ಮಾಡಲಾಗುವುದಿಲ್ಲ.
19. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.
20. ಆಯ್ಕೆಯಾಗುವ ಅಭ್ಯರ್ಥಿಗಳು ಅವರನ್ನು ನೇಮಿಸಿರುವ ಕೇಂದ್ರಸ್ಥಾನದಲ್ಲಿ ಕಡ್ಡಾಯವಾಗಿ ವಾಸ ಮಾಡಬೇಕು ಹಾಗೂ ಅಂತಹ ವಾಸಸ್ಥಳದ ವಿಳಾಸವನ್ನು ತಹಶೀಲ್ದಾರ್‌ರಿಗೆ ಲಿಖಿತ ರೂಪದಲ್ಲಿ ನೀಡತಕ್ಕದ್ದು.
21. ಅಭ್ಯರ್ಥಿಗಳ ಜೇಷ್ಠತಾ ಪಟ್ಟಿಯು ಅವರ ನೇಮಕಾತಿಯ ಅಂತಿಮ ಆಯ್ಕೆ ಪಟ್ಟಿಯನ್ನು ಆಧರಿಸಿ ಇರುತ್ತದೆ.

ಅಧ್ಯಕ್ಷರು, ಗ್ರಾಮಲೆಕ್ಕಿಗರ ನೇರ ನೇಮಕಾತಿ
ಆಯ್ಕೆಪ್ರಾಧಿಕಾರ ಮತ್ತು ಜಿಲ್ಲಾಧಿಕಾರಿಗಳು,
ಕೋಲಾರ ಜಿಲ್ಲೆ, ಕೋಲಾರ.

P.R. 23